# ವಿಜಯ ದುಂದುಭಿ

## ( ವೀರರಸ ಕವನಗಳ ಸಂಕಲನ )



ಸಂಪಾದಕರು :

ರಾ. ಯ. ಧಾರವಾಡಕರ



೧೯೬೩

# ಪ ರಿ ವಿ ಡಿ

## ಭಾರತ ಕ್ಷಾತ್ರ ಪರಂಪರೆ :

ವಿಜಯಾಯ ಹಿ ನಿರ್ಯಾಹಿ
ಪ್ರತಪನ್ ರಶ್ಮಿವಾನಿವ
ಮಾನಂ ವಿಧಮ ಶತ್ರೂಣಾಂ
**ಜಯೋಽಸ್ತು ತವ ಸರ್ವದಾ** ||

(ಮಹಾಭಾರತ ಶಾಂತಿಪರ್ವ ೬೭-೨೯)

ಯ ಇಮೇ ರೋದಸೀ ಉಭೇ
ಅಹಮಿಂದ್ರಂ ಅತುಷ್ಟವಂ
ವಿಶ್ವಾಮಿತ್ರಸ್ಯ ರಕ್ಷತಿ
ಬ್ರಹ್ಮೇದಂ ಭಾರತಂ ಜನಂ ||

(ಋಗ್ವೇದ)

ಸಂಭಾವಿತಸ್ಯ ಚ ಅಪಕೀರ್ತಿಃ ಮರಣಾತ್ ಅತಿರಿಚ್ಯತೇ—
ತತೋ ಯುದ್ಧಾಯ ಯುಜ್ಯಸ್ವ—

—ಶ್ರೀಮದ್ಭಗವದ್ಗೀತೆ

# ಕನ್ನಡ ಕ್ಷಾತ್ರ ಪರಂಪರೆ :

ಸಾಧುಗೆ ಸಾಧು– ಮಾಧುರ್ಯನ್ಗೆ ಮಾಧುರ್ಯಂ ।
ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್ ।
ಮಾಧವನೀತನ್ ಪೆಱನಲ್ಲ ॥

ಕಟ್ಟಿದ ಸಿಂಘಮನ್– ಕೆಟ್ಟೊದೇನೆಮಗೆಂದು ।
ಬಿಟ್ಟವೋಲ್ ಕಲಿಗೆ ವಿಪರೀತಂ ।
ಗಹಿತರ್ಕ್ಕಳ್ ಕೆಟ್ಟರ್ ಮೇಣ್ ಸತ್ತರವಿಚಾರಂ ॥

(ಬಾದಾಮಿ ಶಾಸನ ಕ್ರಿ. ಶ. ಸು. ೭೦೦)

ವರಂ ತೇಜಸ್ವಿನೋ ಮೃತ್ಯುಃ
ನತು ಮಾನಾವಖಂಡನಂ ।
ಮೃತ್ಯುಸ್ತತ್ ಕ್ಷಣಿಕೋ ದುಃಖಂ
ಮಾನಭಂಗಂ ತು ದಿನೇ ದಿನೇ ॥

(ಕನ್ನಡ ಶಾಸನ ಸಾಹಿತ್ಯ)

ಜಿತೇನ ಭೋಗ್ಯತೇ ಲಕ್ಷ್ಮೀಃ ಮೃತೇನಾಪಿ ಸುರಾಂಗನಾ
ಕ್ಷಣವಿಧ್ವಂಸಿನೀ ದೇಹೇ ಕಾಚಿಂತಾ ಮರಣೇ ರಣೇ ॥

(ಕನ್ನಡ ಶಾಸನ ಸಾಹಿತ್ಯ)

ನೆಹರು—ವಾಣಿ :

Every generation has to fight anew the battle for freedom. Otherwise, we grow soft and forget the basic values of life and freedom and tend to lose their essence.

Let us not waste our energies in futilities and in anything which is beneath the dignity of a nation determined to carry out the great task before us; and let us avoid every kind of abuse and vulgarity in our language and deeds. That is unbecoming and degrading to a mature nation out to perform great deeds.

Let us remember that we are passing through a time of grave national emergency and that we are determined to profit by this opportunity in building up a great nation in which all of our people have equal opportunities of Progress.

November 11, 1962 **Jawaharlal Nehru**

ಭಾರತ ಸರಕಾರದ ರಕ್ಷಣಾ ಮಂತ್ರಿ

## ಮಾನ್ಯ ಶ್ರೀ ವಾಯ್. ಬಿ. ಚವ್ಹಾಣ

ಅವರ

# ಸಂದೇಶ



MINISTER OF DEFENCE

New Delhi,
4th February 1963.

Dear Shri Hukerikar,

I have received your letter of 1st February. I was glad to learn of the activities of J.S.S.College towards Defence efforts. Publication of poems in Kannada on Defence efforts is certainly something novel. Poetry and martial songs can play an important role in enthusing people at such times as we are facing today. I wish the enterprise all success.

Yours sincerely,

(Y.B. Chavan)

Shri R.S.Hukerikar,
Vidyagiri,
Dharwar.

ಹೊಸದಿಲ್ಲಿ,
೪, ಫೆಬ್ರುವರಿ, ೧೯೬೩.

ಪ್ರಿಯ ಶ್ರೀ **ಹುಕ್ಕೇರಿಕರರೆ,**

ಫೆಬ್ರುವರಿ ೧ನೇ ದಿನಾಂಕದ ತಮ್ಮ ಪತ್ರ ತಲುಪಿತು. ರಾಷ್ಟ್ರರಕ್ಷಣೆಯ ಕಾರ್ಯದಲ್ಲಿ ಜೆ. ಎಸ್. ಎಸ್. ಕಾಲೇಜು ಕೈಕೊಂಡ ಕಾರ್ಯಕ್ರಮಗಳ ಬಗೆಗೆ ತಿಳಿದು ತುಂಬಾ ಸಂತೋಷವಾಯಿತು. ರಾಷ್ಟ್ರರಕ್ಷಣೆಯ ಕಾರ್ಯದ ಬಗೆಗೆ ಕನ್ನಡ ಕವನಗಳ ಸಂಕಲನವನ್ನು ಪ್ರಕಟಿಸುತ್ತಿರುವುದು ನಿಜವಾಗಿಯೂ ನವೀನ ಉಪಕ್ರಮವಾಗಿದೆ. ಭಾರತದ ಜನತೆಯು ಎದುರಿಸುತ್ತಿರುವ ಇಂದಿನಂಥ ಪರಿಸ್ಥಿತಿಯಲ್ಲಿ ಕಾವ್ಯ ಮತ್ತು ವೀರ ಗೀತಗಳು ಜನತೆಯಲ್ಲಿ ಉತ್ಸಾಹ-ಚೈತನ್ಯಗಳನ್ನು ನಿರ್ಮಿಸಲು ತುಂಬಾ ಸಹಾಯ ಮಾಡುತ್ತವೆ. ನಿಮ್ಮ ಪ್ರಯತ್ನವು ಯಶಸ್ವಿಯಾಗಲೆಂದು ಹಾರೈಸುವೆ.

ನಿಮ್ಮ ಸ್ನೇಹಾಂಕಿತ
**ವಾಯ್. ಬಿ. ಚವ್ಹಾಣ**

ಶ್ರೀ. ಆರ್. ಎಸ್. ಹುಕ್ಕೇರಿಕರ
ಅವರಿಗೆ—
ವಿದ್ಯಾಗಿರಿ,
ಧಾರವಾಡ.

# ಮುನ್ನುಡಿ

ಜೀವನವು ಒಂದು ತುಮುಲ ಹೋರಾಟ. ಪ್ರಾಣಶಕ್ತಿಯು ಚೈತನ್ಯದ ಸಹಾಯದಿಂದ, ಭೌತಿಕ ಹಾಗು ರಸಾಯನ ಶಾಸ್ತ್ರಗಳ ಸಹಕಾರದಿಂದ ಜಡ ಧಾತುಗಳ ಪುಂಜಕ್ಕೆ ಜೀವಕಳೆ ಕಟ್ಟಿ ಜೀವಕೋಟಿಯನ್ನು ನಿರ್ಮಿಸಿ ನಡೆಸುತಿದೆ. ಜೀವಕೋಟಿಯಲ್ಲಿ ಮಾನವನೆ ಈಚೆಗಿನವ, ಹೆಚ್ಚಿನವ. ಇತರ ಜೀವಗಳನ್ನು ಗೆಲ್ಲುವದು ಅವನಿಗೆ ಸಾಲದು. ತನ್ನ ಕುಲದಲ್ಲಿಯೂ ಅವನು ಕಲಹ ಹೂಡಿ ವಿವಿಧ ಹೋರಾಟದಲ್ಲಿ ತೊಡಗಿದ್ದಾನೆ; ಶಸ್ತ್ರಾಸ್ತ್ರಗಳ ಮೇಲಾಟದಲ್ಲಿ ಮಗ್ನನಾಗಿದ್ದಾನೆ. ಪರಿಣಾಮತಃ ಅಣ್ವಸ್ತ್ರಗಳ ಯುಗ ಈಗ ಪ್ರವರ್ತಿಸಿದೆ. ಅದು ಮಾನವ ಕುಲವನ್ನೆಲ್ಲ ನಾಶಗೊಳಿಸಲನುವಾಗಿದೆ.

ರಾಷ್ಟ್ರರಾಷ್ಟ್ರಗಳ ಹೋರಾಟದಲ್ಲಿ ತೊಡಗದಿರುವದು ಭಾರತದ ನೀತಿ. ಆಕ್ರಮಣಶೀಲತೆ ಅದರ ಸ್ವಭಾವದಲ್ಲಿಲ್ಲ. ಆಕ್ರಮಕ ಬ್ರಿಟಿಶರೊಡನೆ ಹೋರಾಟ ಹೂಡಬೇಕಾಗಿ ಬಂದರೂ ಭಾರತ ನಿಃಶಸ್ತ್ರ ಪ್ರತೀಕಾರವನ್ನೆ ಅಮಲಿನಲ್ಲಿ ತಂದು ತನ್ನ ಸ್ವಾತಂತ್ರ್ಯವನ್ನು ದೊರಕಿಸಿತು.

ತಾನು ಮೈತ್ರಿಯಿಂದಿದ್ದರೆ ಎಲ್ಲರೂ ಮೈತ್ರಿಯಿಂದಿರುವರು; ತಾನು ಆಕ್ರಮಣ ಮಾಡದಿದ್ದರೆ ಇತರರೂ ಆಕ್ರಮಣ ಮಾಡಲಾರರು, ಎಂಬುದೊಂದು ಭ್ರಮೆ ಭಾರತಕ್ಕಿತ್ತು. ಆದರೆ ರಾಜಕೀಯ, ರಾಜಕಾರಣ ಇನ್ನೂ ಧರ್ಮಕಾರಣದ ಪಾಠಗಳನ್ನು ಕಲಿತಿಲ್ಲ. ಆದುದರಿಂದ ಧರ್ಮಕಾರಣದವರು ಕೂಡ ರಾಜಕಾರಣ ಕ್ಷೇತ್ರದಲ್ಲಿ ಕಾಲಿಡುವ ಪ್ರಸಂಗವು ಬರುತಿದೆ, ಬಂದಿದೆ.

ನಿನ್ನೆ ಮಿತ್ರರಿದ್ದವರು ಇವತ್ತು ಶತ್ರುಗಳಾಗಿ ಪರಿಣಮಿಸಿದ್ದಾರೆ. ಇದು ಚೀನೀ ರಾಷ್ಟ್ರಕ್ಕೆ ಸಲ್ಲದು. ಆದರೂ ಅಲ್ಲಿಯ ನಿರಂಕುಶ ರಾಜ್ಯಕರ್ತರು ಈ ಕೃತಿಯನ್ನೆಸಗಿದ್ದಾರೆ. ಆ ಆಕ್ರಮಣದ ಪ್ರತೀಕಾರ – ಹಿಂಸೆಯಿಂದಲೋ ಅಹಿಂಸೆಯಿಂದಲೋ ಮಾಡೇ ತೀರಬೇಕಾಗಿ ಬಂದಿದೆ. ಅಷ್ಟು ಅಹಿಂಸಾಶಕ್ತಿ ಇನ್ನೂ ಬೆಳೆದಿಲ್ಲ, ಸಂಘಟಿತವಾಗಿಲ್ಲ. ಜನರಲ್ಲಿ ವಿಶ್ವಾಸ ಹುಟ್ಟಿಸುವಷ್ಟು

ಸಮರ್ಥವಾಗಿಲ್ಲ. ಆದುದರಿಂದ ನಮ್ಮ ಸರಕಾರದವರು ರಾಷ್ಟ್ರದ ಸಂರಕ್ಷಣೆಗೆ ಅಣಿಯಾಗಿದ್ದಾರೆ.

ಯಾವದೇ ಹೋರಾಟಕ್ಕಾದರೂ ನಮ್ಮ ಪಕ್ಷ ಸತ್ಯವಿರಬೇಕು, ಧೃತಿ-ಗೆಡದೆ ಹೋರಾಡುವ ಸಾಮರ್ಥ್ಯ ಬೇಕು; ಧೈರ್ಯ ಶೌರ್ಯ ಸಾಹಸಗಳು ಬೇಕು, ಯೋಗ್ಯವಾದ ಶಸ್ತ್ರಾಸ್ತ್ರಗಳು ಬೇಕು. ದೇಶಭಕ್ತಿಪೂರಿತರಾಗಿ ಹೋರಾಡುವ ಸೈನಿಕರು ಬೇಕು. ಸೈನಿಕರಿಗೆ ಸಹಾಯವೆಂದು ನಿಂತು ವಿಧವಿಧದಿಂದ ಸಹಕಾರ ಮಾಡುವ ಜನಸಾಮಾನ್ಯರು ಬೇಕು.

ಈ ಕವನ ಸಂಗ್ರಹವು ಎಲ್ಲರಲ್ಲಿಯೂ ಶೌರ್ಯ, ಸಾಹಸ, ತಕ್ಕ ಸೇವಾ ಭಾವ, ತ್ಯಾಗಬುದ್ಧಿ, ಇವುಗಳನ್ನು ನಿರ್ಮಿಸುವಂತಹದಿದೆ. ಇದು ಶೌರ್ಯ ರಸಾಯನವು ಎಂದರೂ ಸಲ್ಲುವದು. ಎಲ್ಲಕ್ಕೂ ಧೃತಿ (ಮೊರಾಲ್) ಮುಖ್ಯ. ಆ ಧೃತಿ ಬರಲಿ, ಇರಲಿ; ರಾಷ್ಟ್ರರಕ್ಷಣದ ಶಕ್ತಿಯನ್ನು ಕೊಡಲಿ ಎಂದು ಹಾರೈಸುವೆ.

—ರಂಗನಾಥ ದಿವಾಕರ

# ಶುಭ ಸಂದೇಶ :

ಚೀನೀಯರ ಆಕ್ರಮಣವೃತ್ತಿಯಿಂದ ನಮ್ಮ ರಾಷ್ಟ್ರಕ್ಕೆ ಒದಗಿರುವ ಇಂದಿನ ಆಪತ್ಕಾಲದಲ್ಲಿ, ಜನತೆಯ ಭಾವನೆಗಳನ್ನು ಬಡಿದೆಬ್ಬಿಸುವ ಅಗತ್ಯತೆಯನ್ನು ಕುರಿತು ನಮ್ಮ ಮುಂದಾಳುಗಳು ಒತ್ತಿ ಹೇಳುತ್ತಿದ್ದಾರೆ. ಈ ಕಾರ್ಯವನ್ನು ಈಡೇರಿಸುವದಕ್ಕಾಗಿ ಸರಕಾರದ ಹಾಗೂ ಸಾರ್ವಜನಿಕ ಪ್ರಚಾರ ಶಾಖೆಗಳು ತಮ್ಮ ರೀತಿಯಲ್ಲಿ ಮುಂದುವರಿಯುತ್ತಿವೆ. ಈ ದಿಸೆಯಲ್ಲಿ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಈಗಾಗಲೇ ನಡೆದಿರುವ ಒಂದೆರಡು ಸಣ್ಣಪುಟ್ಟ ಪ್ರಯತ್ನಗಳನ್ನು ಬಿಟ್ಟರೆ, ಪ್ರಕೃತ ಕವನಸಂಕಲನವಾದ 'ವಿಜಯ ದುಂದುಭಿ' ಗಾತ್ರದಲ್ಲಿಯೂ, ಗುಣದಲ್ಲಿಯೂ ಎದ್ದು ಕಾಣುವಂತಹದು ಎಂದು ಹೇಳಬಹುದು. ದೇಶಾಭಿಮಾನವನ್ನು ಪ್ರಚೋದಿಸುವುದರ ಜೊತೆಗೆ ವಾಸ್ತವ ಪರಿಸ್ಥಿತಿಯ ಅರಿವನ್ನುಂಟುಮಾಡಿಕೊಡುವ, ಎಚ್ಚರಿಕೆಯನ್ನು ನೀಡುವ, ಸಾಹಸಕ್ಕಾಗಿ ಅಣಿಗೊಳಿಸುವ, ಧೀರವಾಣಿಯನ್ನು ನಮ್ಮ ಕನ್ನಡದ ಕವಿಗಳು ತಮ್ಮ ತಮ್ಮ ಶಕ್ತಿಗನುಗುಣವಾಗಿ 'ವಿಜಯ ದುಂದುಭಿ' ಯಲ್ಲಿ ಮೊಳಗಿಸಿದ್ದಾರೆ. ಈ ಭಾವನೆಗಳು ಕಾವ್ಯರೂಪದಲ್ಲಿ ಓದುಗರ ಹೃದಯಕ್ಕೆ ಮುಟ್ಟಿ, ಮನಸ್ಸನ್ನು ತಟ್ಟುವುದರಲ್ಲಿ ಸಂಶಯವಿಲ್ಲ.

ಈ ಸಂದರ್ಭದಲ್ಲಿ, ಇಂತಹ ಮಹತ್ವಪೂರ್ಣವಾದ ಕವನ ಸಂಗ್ರಹವೊಂದನ್ನು ಕರ್ನಾಟಕ ವಿಶ್ವವಿದ್ಯಾಲಯದ ಅಂಗಸಂಸ್ಥೆಯೊಂದು ಧಾರವಾಡದಲ್ಲಿ ಪ್ರಕಟಿಸಿ, ಬೆಳಕಿಗೆ ತಂದಿರುವುದು ನನಗೆ ಅಭಿಮಾನದ ಸಂಗತಿಯಾಗಿದೆ. ಇದರ ಸಂಪಾದಕರಾಗಿ ತಮ್ಮ ಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸಿರುವ ಪ್ರಿ. ರಾ. ಯ. ಧಾರವಾಡಕರ ಅವರನ್ನೂ ಹಾಗೂ ಅವರಿಗೆ ನೆರವಾದ ಕವಿಗಣವನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧೩-೩-೧೯೬೩

**ಡಾ. ಚಿಂ. ಪಾವಟೆ**
ಉಪಕುಲಪತಿ

# ಸಂಪಾದಕರ ನುಡಿ

ಅನಿರೀಕ್ಷಿತವಾದ ಚೀನೀ ದುರಾಕ್ರಮಣವು ಇಡೀ ನಾಡನ್ನೇ ಕೆರಳಿಸಿತು. ದೇಶದ ತುಂಬೆಲ್ಲ ಎಂದೂ ಕಂಡಿರದ ಐಕ್ಯತೆ ಮೂಡಿ ಬಂದಿತು. ಶಿಕ್ಷಕರು, ವಿದ್ಯಾರ್ಥಿಗಳು, ವಕೀಲರು, ವ್ಯಾಪಾರಸ್ಥರು, ರಾಜಕಾರಣಿಗಳು,— ಎಲ್ಲರೂ ದೇಶಕಾರ್ಯಕ್ಕೆ ಮುನ್ನುಗ್ಗಿದರು.

● ಇಂಥ ದೇಶಸೇವೆಯ ಕಾರ್ಯದಲ್ಲಿ ಧಾರವಾಡದ ಜೆ. ಎಸ್. ಎಸ್ ಕಾಲೇಜೂ ತನ್ನ ವಿನಮ್ರ ಸೇವೆಯನ್ನು ಸಲ್ಲಿಸಿತು.

● ಕಾಲೇಜಿನ ವಿದ್ಯಾರ್ಥಿಗಳು ಮತ್ತು ಪ್ರಾಧ್ಯಾಪಕರು ಕೂಡಿ ಸುಮಾರು ೫,೦೦೦ ರೂಪಾಯಿಗಳನ್ನು ರಾಷ್ಟ್ರ ರಕ್ಷಣಾನಿಧಿಗೆ ಸಮರ್ಪಿಸಿದರು. ಸಾರ್ವಜನಿಕ ತಿಳಿವಳಿಕೆಯನ್ನು ಉಂಟುಮಾಡುವ ದೃಷ್ಟಿಯಿಂದ ಹಿಮಾಲಯದ ಗಡಿ ವಿಷಯವಾಗಿ ಭಾಷಣಮಾಲೆಯನ್ನು ಏರ್ಪಡಿಸಿದರು. ಒಂಬತ್ತು ವಿದ್ಯಾರ್ಥಿಗಳು ಸೈನಿಕ ಸೇವೆಯಲ್ಲಿ ಸೇರ್ಪಡೆ ಹೊಂದಿದರು. ಒಬ್ಬ ವಿದ್ಯಾರ್ಥಿಯು OFFICFR TRAINING UNIT ಇಗೆ ಆರಿಸಲ್ಪಟ್ಟನು. ಈಗಿದ್ದ ೧೩೦ ವಿದ್ಯಾರ್ಥಿಗಳ N. C. C. ಘಟಕದ ಜೊತೆಗೆ ಹೆಚ್ಚಿನ ೧೬೦ ವಿದ್ಯಾರ್ಥಿಗಳ N. C. C. (Rifles) ಘಟಕವನ್ನೂ ಪ್ರಾರಂಭಿಸಲಾಯಿತು. ವಿದ್ಯಾರ್ಥಿಗಳ ಅನುಕೂಲತೆಗಾಗಿ ಕಾಲೇಜಿನ ಆವಾರದಲ್ಲಿ Rifle Shooting Range ನಿರ್ಮಾಣ ಮಾಡಲಾಯಿತು ಅದರಂತೆಯೇ, ನಾಡಿನ ಶ್ರೇಷ್ಠ ಕವಿಗಳು ವೀರರಸಪ್ರಧಾನವಾಗಿ ಬರೆದ ಕವಿತೆಗಳನ್ನು ಕಾಲೇಜಿನ ವತಿಯಿಂದ ಸಂಕಲಿಸಿ ಪ್ರಕಟಿಸಬೇಕೆಂದು ನಿರ್ಧರಿಸಲಾಯಿತು. ಅದರ ಫಲವೇ ಈ "ವಿಜಯ ದುಂದುಭಿ".

● ಇಂದು ಚೀನೀಯರೇ ಇರಲಿ; ಅಥವಾ ಬೇರೆ ಯಾವ ವೈರಿಗಳೇ ಇರಲಿ; ಚೀನೀ ದುರಾಕ್ರಮಣದಿಂದ ದೇಶದ ಜನತೆ ಒಂದು ಮಾತನ್ನು ಮಾತ್ರ ಕಂಡುಕೊಂಡಿದೆ. ಇನ್ನು ನಮ್ಮ ಮುಂದಿನ ಜೀವನ ಮಾರ್ಗ ಮಾತ್ರ ಸುಖ ಸ್ವಪ್ನದ ಸುಪ್ಪತ್ತಿಗೆಯಾಗಿರದೆ, ಗಂಡಾಂತರದ ಗುಹೆಯಲ್ಲಿಯೇ ವಾಸಿಸ-

ಬೇಕಾದ ಧೀರ ಜೀವನವಾಗಬೇಕಾಗಿದೆ. ಕ್ಷಾತ್ರ ನಮ್ಮ ಸಂಚಾರಿ ಭಾವ-ವಾಗಲಾರದು; ಸ್ಥಾಯಿಯಾಗಬೇಕಾಗಿದೆ. ನಮ್ಮ ಪ್ರಧಾನ ಅಮಾತ್ಯರು ಹೇಳಿದ ಹಾಗೆ "Emergency is not over; we shall have to live with the emergency." ಇಂಥ ಜೀವನದ ಮಂಗಲೋದಯಕ್ಕಾಗಿ ನಮ್ಮ ಕವಿಗಳಿತ್ತ ವೀರ ಸಂದೇಶವನ್ನು ಈ "ವಿಜಯ-ದುಂದುಭಿ" ಯಲ್ಲಿ ನಾವು ಕೇಳುತ್ತಿದ್ದೇವೆ. ನಾವು ಕೇಳಿದಾಕ್ಷಣವೇ, ಎಂದಿನಂತೆಯೇ ಅಭಿಮಾನದಿಂದ ತಮ್ಮ ಕವಿತೆಗಳನ್ನು ಒಡನೆಯೇ ದಯ-ಪಾಲಿಸಿದ ಕವಿವೃಂದಕ್ಕೆ ಅನಂತ ಕೃತಜ್ಞತೆಗಳು.

● "ವಿಜಯ ದುಂದುಭಿ" ಎಂಬ ಹೆಸರಿನ ಬಗೆಗೂ ಸ್ವಲ್ಪ ವಿಚಾರ ಮಾಡಬೇಕಾಯಿತು. ಇದೇ ಹೆಸರಿನ ಕವನ ಸಂಗ್ರಹವೊಂದು ಕನ್ನಡ ರಾಜ್ಯೋದಯ ಕಾಲಕ್ಕೆ ಪ್ರಕಟವಾಗಿದ್ದರಿಂದ ಬೇರೆ ಹೆಸರನ್ನಿಡಬೇಕೇ ಎಂಬ ವಿಚಾರ ಬಂದಿತು. ರಾಜ್ಯೋದಯ ಕಾಲದಲ್ಲಿ ಮೊಳಗಿದ ದುಂದುಭಿಯೇ, ನಾಡಿನಲ್ಲಿ ಕ್ಷಾತ್ರವೃತ್ತಿ ನೆಲೆಗೊಳ್ಳಬೇಕಾದ ಇಂದಿನ ಕಾಲದಲ್ಲಿಯೂ ಮೊಳಗಬೇಕಾದ್ದರಿಂದ, "ವಿಜಯ ದುಂದುಭಿ" ಎಂಬ ಹೆಸರನ್ನೇ ಸಂಕಲನಕ್ಕೆ ಇಡಲಾಯಿತು.

● "ವಿಜಯ ದುಂದುಭಿ" ಸಂಕಲನದ ವಿಚಾರವನ್ನು ಸೂಚಿಸಿದಾಗ ತುಂಬಾ ಉತ್ತೇಜನವಿತ್ತು ಮಾರ್ಗದರ್ಶನ ಮಾಡಿದ ಶ್ರೀಮಾನ್ ಆರ್. ಎಸ್. ಹುಕ್ಕೇರಿಕರಜಿಯವರಿಗೆ ಕೃತಜ್ಞತೆಗಳು. ಈ ಗ್ರಂಥ ಸಂಕಲನಕ್ಕಾಗಿ ಸರ್ವ ವಿಧದ ಅನುಕೂಲತೆಗಳನ್ನು ಒದಗಿಸಿ ಕೊಟ್ಟು ಸಂಕಲನವು ತೀವ್ರವೇ ಹೊರ ಬರುವಂತೆ ಸಹಾಯ ಮಾಡಿದ, ಜನತಾ ಶಿಕ್ಷಣ ಸಮಿತಿಯ ಕಾರ್ಯವಾಹಕ ಮಂಡಳದ ಅಧ್ಯಕ್ಷರಾದ ಶ್ರೀ ಆರ್. ಜೆ. ದೇಶಪಾಂಡೆಯವರಿಗೆ ಅನಂತ ವಂದನೆಗಳು.

● ನಾವು ಕೇಳಿದಾಕ್ಷಣ ತಮ್ಮ ಅಮೋಘವಾದ ಸಂದೇಶವನ್ನಿತ್ತ ಭಾರತ ಸರಕಾರದ ಸಂರಕ್ಷಣಾ ಮಂತ್ರಿ ಮಾನ್ಯ ಶ್ರೀ ವಾಯ್. ಬಿ. ಚವ್ಹಾಣ ಅವರಿಗೂ ಮತ್ತು ಸ್ಫೂರ್ತಿಪ್ರದವಾದ ಮುನ್ನುಡಿಯನ್ನು ದಯಪಾಲಿಸಿ ನಮಗೆ ಉತ್ತೇಜನವಿತ್ತ ರಾಜರ್ಷಿ ಆರ್. ಆರ್. ದಿವಾಕರಜಿಯವರಿಗೂ,

ಆಶೀರ್ವಾದಪರ ಸಂದೇಶವನ್ನಿತ್ತು ಮಾರ್ಗದರ್ಶನ ಮಾಡಿದ ನಮ್ಮ ವಿಶ್ವವಿದ್ಯಾಲಯದ ಜನಪ್ರಿಯ ಉಪಕುಲಪತಿಗಳಾದ ರ್‍ಯಾಂಗ್ಲರ್ ಡಿ. ಸಿ. ಪಾವಟೆಯವರಿಗೂ ನಮ್ಮ ಅನಂತ ಪ್ರಣಾಮಗಳು.

● ವಿವಿಧ ಪ್ರದೇಶಗಳಲ್ಲಿ ಏರ್ಪಡಿಸಿದ ವೀರರಸ ಕವಿತಾ ಗೋಷ್ಠಿಯಲ್ಲಿ ಹೇಳಲಾದ ಹಲವು ಕವನಗಳನ್ನು ಈ ಸಂಗ್ರಹದಲ್ಲಿ ಪವಣಿಸಲು ಅನುಮತಿಯನ್ನು ಕೊಟ್ಟ ಕೇಂದ್ರ ಸರಕಾರದ ವಾರ್ತಾ ಇಲಾಖೆಯ ಪ್ರಾದೇಶಿಕ ಅಧಿಕಾರಿಗಳಾದ ಶ್ರೀ ಎನ್. ಎಸ್. ವೆಂಕೋಬರಾವ್ ಅವರಿಗೂ ಮತ್ತು ಈ ಸಂಕಲನದ ಮುದ್ರಣಭಾರವನ್ನು ವಹಿಸಿದ 'ನೀರದ ಪ್ರಕಾಶನ'ದ ಶ್ರೀ ವರದರಾಜ ಹುಯಿಲಗೋಳ ಅವರಿಗೂ ನಮ್ಮ ಕೃತಜ್ಞತೆಗಳು.

● ಕವನಗಳ ಆಯ್ಕೆ-ಸಂಕಲನದಿಂದ ಪ್ರಾರಂಭಗೊಂಡು, ಅಚ್ಚಿನ ಕರಡುಗಳನ್ನು ತಿದ್ದುವವರೆಗೆ ನನಗೆ ಸರ್ವವಿಧದ ಸಹಾಯವನ್ನು ಮಾಡಿದ ಮಿತ್ರ ಪ್ರೊ. ಜಿ. ಡಿ. ನಾಡಕರ್ಣಿಯವರ ಸಹಕಾರ ತುಂಬಾ ಬೆಲೆಯುಳ್ಳದು ಅದಕ್ಕಾಗಿ ಅವರಿಗೆ ಕೃತಜ್ಞ.

● ತೀರ ಅತ್ಯಲ್ಪ ಕಾಲದಲ್ಲಿಯೇ ಈ ಸಂಕಲನವನ್ನು ಅಂದವಾಗಿ ಮುದ್ರಿಸಿ ಕೊಟ್ಟ "ವಸಂತ"ದ ಒಡೆಯರಾದ ಶ್ರೀ ಎಮ್. ಜಿ. ಪಾಲೇಕರ ಅವರ ಸಹಾಯವನ್ನು ಸ್ಮರಿಸಲೇ ಬೇಕು.

● ನಾಡಿನ ನವನಿರ್ಮಾಣದ ಕಾರ್ಯದಲ್ಲಿ ಈ "ವಿಜಯ ದುಂದುಭಿ" ತನ್ನ ಅಲ್ಪ ಸೇವೆಯನ್ನು ಸಲ್ಲಿಸುವುದಾದರೆ ನಾವು ಧನ್ಯ !

ಜೆ. ಎಸ್. ಎಸ್. ಕಾಲೇಜ್,
ಧಾರವಾಡ.
ವರ್ಷಪ್ರತಿಪದೆ,
೨೬-೩-೧೯೬೩

ರಾ. ಯ. ಧಾರವಾಡಕರ
ಸಂಪಾದಕ

# ಭಾರತ-ಗೀತ

ಜಯ ಜನ ಭಾರತ, ಜನಮನ ಅಭಿಮತ,
ಜನಗಣತಂತ್ರ ವಿಧಾತಾ !
ಗೌರವ ಭಾಲ ಹಿಮಾಲಯ ಉಜ್ಜ್ವಲ
ಹೃದಯ ಹಾರ ಗಂಗಾಜಲ,
ಕಟಿ ವಿಂಧ್ಯಾಚಲ, ಸಿಂಧು ಚರಣತಲ,
ಮಹಿಮಾ ಶಾಶ್ವತಗಾತಾ !

ಹರೇ ಖೇತ ಲಹರೇ ನದ-ನಿರ್ಭರ
ಜೀವನ ಶೋಭಾ ಉರ್ವರ,
ವಿಶ್ವಕರ್ಮ-ರತ ಕೋಟಿ ಬಾಹುಕರ
ಅಗಣಿತ ಪದ ಧ್ರುವ ಪಥ ಪರ !

ಪ್ರಥಮ ಸಭ್ಯತಾ ಜ್ಞಾತಾ, ಸಾಮ ಧ್ವನಿತ ಗುಣ ಗಾಥಾ,
ಜಯ ನವ ಮಾನವತಾ ನಿರ್ಮಾತಾ,
ಸತ್ಯ ಅಹಿಂಸಾ ದಾತಾ !
ಜಯ ಹೇ, ಜಯ ಹೇ, ಜಯ ಹೇ, ಶಾಂತಿ ಅಧಿಷ್ಠಾತಾ !

ಪ್ರಯಾಣ ತೂರ್ಯ ಬಜ ಉಠೇ,
ಪಟಹ ತುಮುಲ ಗರಜ ಉಠೇ,
ವಿಶಾಲ ಸತ್ಯ ಸೈನ್ಯ, ಲೌಹ-ಭುಜ ಉಠೇ,
ಶಕ್ತಿ ಸ್ವರೂಪಿಣಿ, ಬಹುಬಲ ಧಾರಿಣಿ, ವಂದಿತ ಭಾರತ ಮಾತಾ,
ಧರ್ಮಚಕ್ರ ರಕ್ಷಿತ ತಿರಂಗ ಧ್ವಜ ಅಪರಾಜಿತ ಫಹರಾತಾ !
ಜಯ ಹೇ, ಜಯ ಹೇ, ಜಯ ಹೇ, ಅಭಯ, ಅಜಯ, ತ್ರಾತಾ !

— **ಸುಮಿತ್ರಾನಂದನ ಪಂತ**

# ಎಲೆ ಚೀನಾವೆ !

ಕೊನೆಯೆಚ್ಚರವಿದ ಕೊರೆದಿಡು ಮನದಲಿ;
ಉದ್ಧಟತನ ಬಿಡು ತಕ್ಷಣವೆ !
ಇಷ್ಟಮಿತ್ರನಿಗನಿಷ್ಟವ ಬಯಸದೆ
ಶಿಷ್ಟನಾಗು ಎಲೆ ಚೀನಾವೆ !

ಸಿಂಹ–ಗರಡಿಯಲಿ ಬೆಳೆದ **ಭರತ** ನಾ !
ಹುಲಿಯ ಹೊಯ್ದ **ಸಳ**–ವೀರಕಲಿ !
ಮನೆಯ ಹೊಕ್ಕ ಸಾಮ್ರಾಜ್ಯ–ಸಿಂಹ ಸಾ-
ಗರ ಬಿದ್ದೋಡಿದೆ ನೆನಪಿರಲಿ !

" ಹಸುಳೆ ಮಾತು, ಕೈಲಾಗದವನ ನುಡಿ "–
ಎಂದು ಬಗೆಯದಿರು ಲಘುವಾಗಿ;
ಶಾಂತಮೂರ್ತಿ ಶಿವಶಂಕರನಾದರು,
ಕೆರಳಿಹೆ ಪ್ರಲಯಂಕರನಾಗಿ !

ಹಾಲನೂಡಿದಗೆ ವಿಷವ ನೀಡಿರುವ
ಎರಡು ನಾಲಗೆಯ ವಿಷಕೀಟ,
ವಿಷದ ಹಲ್ಲುಗಳ ಕಿತ್ತೇ ಕಲಿಸುವೆ
ದ್ರೋಹಕೆ ತಕ್ಕಂತಹ ಪಾಠ !

ಎಂಥ ದುಷ್ಟ ಜಂತುವು ನೀನಾಗಿರು :
ಕಾಳಿಂಗನ ಕುಲವಾದರು ಸೈ;

ಕಾಲಯಮನು, ಆ ಬಾಲಕೃಷ್ಣನಾ-
ಗುತ್ತ ಹೆಡೆಯ ತಲೆ ಮೆಟ್ಟುವೆನ್ನೈ !

ಕೊನೆಯೆಚ್ಚರವಿದ ಕೊರೆದಿಡು ಮನದಲಿ;
ಉದ್ಧಟತನ ಬಿಡು ತಕ್ಷಣವೆ !
ಇಷ್ಟಮಿತ್ರನಿಗನಿಷ್ಟವ ಬಯಸದೆ
ಶಿಷ್ಟನಾಗಿ ಬಾಳ್ ಚೇನಾವೆ !

— ಎಂ. ಅಕಬರ ಅಲಿ

# ಕಿಡಿ-ನುಡಿ

೧

ಕಾಳೆಗದ ಕರೆಯು ಮೊಳೆಯುವ ಕೊಂಡು
ಕಣಕಿಳಿದು ನಾಡು ಸನ್ನದ್ಧ;
ಸ್ವಾಭಿಮಾನ–ಸ್ವಾತಂತ್ರ್ಯ ರಕ್ಷಣೆಗೆ
ಪ್ರಾಣ ಮುಡಿಪಿರಿಸಿ ಕಟಿಬದ್ಧ !

೨

ರೆಂಟೆ ಹಿಡಿದ ಕೈ, ಬಲರಾಮನದ್ದೆ !
ಚಕ್ರ–ಪಾಣಿ ಶ್ರೀಕೃಷ್ಣನದು !
ಕೋವಿ ಕೊಂಡು ಸಿಡಿಲಾಗಿ ನಡೆದ ಪಡೆ
ವೀರಭದ್ರನವತಾರವದು !

೩

ಬೂದಿ–ಇದ್ದಿಲೆಂದೆನುತ ಭ್ರಮಿಸದಿರು;
ಕಿಡಿದ ಕೆಂಡವಿದು ವಜ್ರಾಂಗ !
ಇನ್ನು ದುಡುಕಿದರೆ ಮಣ್ಣು ಮುಕ್ಕಿ ನೀ
ಮಾಡಿಕೊಳ್ಳುವಿಯೊ ಮುಖಭಂಗ !

— ಎಂ. ಅಕಬರ ಅಲಿ

# ವೀರಶಪಥ

ಶಪಥಗೈದು ಹೊರಟಿಹೆವಿದೊ, ಗೆಲವು—ಇಲ್ಲ ಸಾವು !
ರಿಪುಗಳನ್ನು ಹಿಂಜರಿಸಲು ಇಲ್ಲ ನಮಗೆ ನೋವು ।

೧

ಶಕಟ–ಕಂಸ–ಮುರ–ನರಕರ ಮುರಿದಾತನ ಭಕ್ತರು—
ಬಕ–ಹಿಡಿಂಬ–ಕೀಚಕರನು ತರಿದ ಭೀಮಶಕ್ತರು !
ಸತ್ಯ ನಮಗೆ ಬೆಂಬಲ—ಅ-
ಸತ್ಯರತವು ಅರಿಕುಲ—ವಿ-
ಪತ್ತಿಗಳುಕದೆಮ್ಮ ಚಲ !....
ಏರಿಬಂದ ಹಗೆಯ ಹರಣ ಹೀರುವಂಥ ಹುರುಡಿದೆ—
ಪಾರತಂತ್ರ್ಯ ಪಾಪವೆಂಥ ಘೋರವೆಂಬ ಅರಿವಿದೆ !
ಶಪಥಗೈದು ಹೊರಟಿಹೆವಿದೊ, ಗೆಲವು....ಇಲ್ಲ ಸಾವು—
ರಿಪುಗಳನ್ನು ಹೊಡೆಯುವಲ್ಲಿ ಮರೆವೆವೆಲ್ಲ ನೋವು !

೨

ಭರತಾಂಬೆಯ ಋಣವದೆನಿತು, ನಮ್ಮ ತಲೆಯಮೇಲೆ—
ನಮ್ಮ ಮೈಯ ಕಣ-ಕಣವೂ ಆಕೆಯೆದೆಯ ಹಾಲೇ !
ತಿನಿಸುತೆ ಮಧುರಾನ್ನ—ಹನಿ-
ಹನಿಸಿ ಅಮೃತಪಾನ—ದಿನ-
ದಿನವು ತುಂಬಿತ್ರಾಣ....
ತಾಯಿ ಪ್ರೀತಿಯಿಂದ ಪೋಷಿಸಿರುವಳೆಮ್ಮ ತನು-ಮನ
ಈಯಲಿಹೆವು ತಾಯಋಣಕೆ ಮೈನೆತ್ತರ ತರ್ಪಣ !
ಶಪಥಗೈದು ಹೊರಟಿಹೆವಿದೊ, ಗೆಲವು....ಇಲ್ಲ ಸಾವು !
ರಿಪುಗಳ ಕರುಳಿರಿಯುವಲ್ಲಿ ನಮಗಿಲ್ಲವೊ ನೋವು !

೩

ಅರಿ ಅದೆನಿತು ಬಲಿಯೆ ಇರಲಿ, ನಮ್ಮ ಪಡೆಗೆ ಕಾಣಿಕೆ—
ಹರೆದು ಮುಂದೆ ಹಗೆಯ ಕೊರಳನರಿವುದೆಮ್ಮ ಪೂಣಿಕೆ !
ಇಂದಿಟ್ಟೀ ಮುಂದಡಿ—ಇದ-
ಕೆಂದಿರದ್ದೆ ಹಿಂದಡಿ—ಗೆಲ-
ವಿಂದ ತುಂಬಿ ತಾಯುಡಿ....
ಒಲವುಗುಡಿಯ ನೇರನಿಲಿಸಿ ಬರುವೆವೆಂದು ಮರಳಿ—
ನಿಲುವರಾರು ನಮ್ಮೆದುರಲಿ....ರಣರಂಗದಿ ಕೆರಳಿ....?
ಶಪಥಗೈದು ಹೊರಟಿಹೆವಿದೊ, ಗೆಲವು....ಇಲ್ಲ ಸಾವು—
ರಿಪುಗಳ ಹಮ್ಮಳಿಸುವಲ್ಲಿ ನಮಗಿಲ್ಲವೊ ನೋವು !

— ಆನಂದಕಂದ

# ಜಯವು ರಣಚಂಡಿ !

೧

ರಣಚಂಡಿ, ಜಯವು ಚಾಮುಂಡಿ, ನೀನೆ ಸ್ವಾತಂತ್ರ್ಯದ ವರದಾನಿ—
ಕುಣಿ-ಕುಣಿಸುತಿರುವೆ ಮನುಕುಲವ ಗೊಂಬೆಯೊಲು, ವೀರರಾಜ್ಯರಾಣಿ !
ಪರದಾಸ್ಯ ಪಾಶ ಹರಿಯಲ್ಕವಶ್ಯ ನಿನ್ನೊಲುಮೆ ಬೇಕು ತಾಯೇ,
ಅರಿಕುಲದ ಕಣ್ಣು ನಾಡಿರಿಯದಂತೆ ಕಾವವಳು ನೀನೆ ಮಾಯೇ !

೨

ನೀ ಹೂಡುತಿರುವೆ ಆಗಾಗ ಸಮರನರಯಾಗ—ಕಾಲಸಂಭೂತೇ,
ಸೈ, ಬೇಡುತಿರುವೆ ಯಾಗಕ್ಕೆ ಬಲಿಯ ಭೋಗವನು, ಶಕ್ತಿವಿಖ್ಯಾತೇ !
ಬಲಿಗಾಗಿ ಬಂದ ನರವೀರವೃಂದ ನಿನ್ನಿಂದ ಸುಗತಿಯನು ಗಳಿಸಿ—
ಉಳಿಸುವರು ದೇಶದಭಿಮಾನಭಾಗ್ಯ ರಿಪುಕುಲದ ಬಿರುದುಗಳನಳಿಸಿ !

೩

ಇದೆ, ಇಹುದುಯಾವ—ಯುಗದಲಿಯು ನೋಡಿದರು ದೇವ-ದೈತ್ಯರಲಿ ದ್ವೇಷ;
ಅದಕೆಂದೆ ದೇವಕುಲಜಾತೆ, ನಿನಗೆ ಅನ್ಯಾಯಕಾರರಲಿ ರೋಷ !
ನೀ ಮಾಟಮಾಡಿ ದೈತ್ಯರಲಿ ಮೂಡಿಸುವೆ ಕ್ರೂರಸಮರದಭಿಲಾಷ—
ದೇವತೆಗಳಲ್ಲಿ ಜಾಗೃತಿಯ ತೂಳಿ, ಮಾಡಿಸುವೆ ವೀರರಸಪೋಷ !

೪

ರಣರಂಗನಟಿಯೆ, ಖಣಖಣಿಪ ಖಡ್ಗಗತಿಯೊಡನೆ ನಡೆಯಿಸುವೆ ನೃತ್ಯ;
ಹೆಣವಾಗಿ ಬೀಳ್ವ ಸೈನಿಕರ ರಕ್ತ ಮೈಗಪ್ಪು ನಿನಗೆ ಪ್ರತಿನಿತ್ಯ !
ತನುಬಿಟ್ಟು ಹೊರಟ ಹರಣಗಳ ಹಾರ ಹೆಣೆಯುವುದು ನಿನಗೆ ಬಲುಪ್ರೀತಿ—
ಕುಣಿ-ಕುಣಿದು ನೀನು ಕವಿಗಳಿಗೆ ವೀರರಸರಚನೆಗೀವೆ ಸುಸ್ಫೂರ್ತಿ !

೫

ನಿನ್ನನ್ನು ಸೃಜಿಸದಿರೆ ಬ್ರಹ್ಮ—ಸೊಗಸು ಇರದಮ್ಮ ಬರಡು ಈ ಸೃಷ್ಟಿ;
ನಿನ್ನಿಂದೆ ರಾಜ್ಯ-ಸಾಮ್ರಾಜ್ಯ ನೆಲಸಿ ನಿಲ್ಲುವುವು ತಾಯೆ ಇದು ಗಟ್ಟಿ !

ನೀನಿರದೆ ಇರಲು ಪುರುಷಾರ್ಥಕುರುಲು, ಈ ಪುರುಷರೆಲ್ಲ ಹೇಡಿಗಳು;
ಹೇಡಿಗಳ ಜೊತೆಯ ಬಗೆ ಮೆಚ್ಚಿ ಹೇಗೆ ಬಯಸೀತು ಹೆಣ್ಣೆದೆಯ ಹುರುಳು ?

೬

ಅಳಿಯಾಶೆ–ಲೋಭ–ಮೋಹಗಳು ನಿನ್ನ ಕೈಯಾಳು, ಅಹುದು ರಣಚಂಡಿ !
ಇಳೆಯಲ್ಲಿ ಆಡಲಣಿಮಾಡಿಕೊಡುವುವೆಡೆ; ಯಾರು ನಿನಗೆ ಸಮದಂಡಿ ?
ತ್ರೈಮೂರ್ತಿಗಳನು ನಿನ್ನಾಟಕೆಂದು ಇಳೆಗಿಳಿಸಿ ತಂದೆ ನೀ ಪಿಗಡಿ–
ಅವರಸ್ತ್ರ–ಶಸ್ತ್ರಚಲನೆಯಲಿ ಸತ್ಯ–ಧರ್ಮಗಳ ರಕ್ಷಿಸಿದೆ ಚವುಡಿ !

೭

ಮೊರೆವೀ ತುತೂರಿ, ಗುಡುಗುಡಿಪ ಭೇರಿರವದಿಂದೆ ನೀನು ಕರೆವೆ–
ಮರೆಸುತ್ತ ಮರಣಭೀತಿಯನು, ಗೆಲುವ ರೀತಿಯನು ಒರೆಯುತಿರುವೆ !
ನಿನ್ನೊಲವ ನಂಬಿ, ಹುಮ್ಮಸವು ತುಂಬಿ ಹೊರಟಿಹೆವು ರಣದ ಕಣಕೆ—
ಹಳೆ ಶಾಂತಿಶಾಸ್ತ್ರ ಬಿಟ್ಟೀಗ ಶಸ್ತ್ರ ಕೊಂಡಿಹೆವು ಜಯದ ಪಣಕೆ !

೮

ಜಯ ಜಯವು, ಜಯವು, ರಣಭೈರವಿ, ಜಯ ಜಗದಂಬೇ,
ನಿನಗಾವ ಪೂಜೆ ಬೇಕದನು ಹೇಳು— ಏನೆಂಬೆ ?
ನಾವ್ ಅಳಿಯಬೇಕೊ, ಗೆಲ್ದಾಳಬೇಕೊ ? ಯಾವುದಕು ಇಹೆವು ಸಿದ್ಧ–
ಹಗೆಗಳಿಗೆ ಹೆದರಿ ಹಿಂಜರಿವರಲ್ಲ; ನಿನ್ನಾಜ್ಞೆ ನಮಗೆ ಬದ್ಧ !

× × × ×

ರಣಚಂಡಿ, ಜಯವು ಚಾಮುಂಡಿ, ನೀನೆ ಸ್ವಾತಂತ್ರ್ಯದ ವರದಾನಿ -
ಕುಣಿ ಕುಣಿಸುತಿರುವೆ ಮನುಕುಲವ ಗೊಂಬೆಯೊಲು ವೀರರಾಜ್ಯರಾಣಿ !

— ಆನಂದಕಂದ

# ಏರಿಬಂದಾನ ವೈರಿ ಗಡಿವ್ಯಾಗ

ಏರಿ ಬಂದಾನ ವೈರಿ ಗಡಿವ್ಯಾಗ ।
ನಮ್ಮ ಗಡಿವ್ಯಾಗ ॥

ಏಳು ಭಾರತವೀರಾ ।
ಕೇಳಿ ರಣಭೇರಿ । ಯುದ್ಧರಂಗಕೆ ಸಾರಿ
ಮಾಡೊ ಶತ್ರು ಸಂಹಾರಾ
ತೋರೊ ಧುರ ಧೈರ್ಯ ।
ಏರಿ ಬಂದಾನ ವೈರಿ ಗಡಿವ್ಯಾಗ ॥

ಸಿಂಹದಂತೆ ಗರ್ಜಿಸಿ ।
ಸಿಡಿಲಿನಂತೆ ಎರಗೊ ನೀ
ತಾಳಿ ರುದ್ರಾವತಾರs ।
ಮಾಡೊ ಶತ್ರು ಸಂಹಾರಾ
ಏರಿ ಬಂದಾನ ವೈರಿ ಗಡಿವ್ಯಾಗ ॥

ನಮ್ಮ ವನದಾಗಿನ ಬೆಳಕು-ಹಣ್ಣು ತಿಂದು ।
ಅಣ್ಣ ತಮ್ಮ, ಬಂಧು-ಎಂದು
ಕೂಡಿ ಬಾಳೋಣು- ಕೂಡಿ ಆಡೋಣು
ಕೂಡಿ ಕೂಡಿ ಬೆಳಗೋಣು—
ಪಂಚಶೀಲ ಪಂಚಾರತಿ-ಬೆಳಗೋಣು
ಹಾಡೋಣು-ಆಡೋಣು
ಎಂದು ನಟಿಸುತ ಬಂದು
ಸವಿ ಸವಿಮಾತ ಅಂದು

ಬೆನ್ನೊಳು ಚೂರಿ ತಿವಿದಾನ
ಕಣ್ಣೊಳು ಸುಣ್ಣ ಸುರಿವ್ಯಾನ
ಅನ್ನಕ್ಕ ದ್ವೇಷದ ವಿಷ ಬೆರಸ್ಯಾನ
ಸಣ್ತನದ ಕೆಸರ ಕಲೆಸ್ಯಾನ
ಏರಿ ಬಂದಾನ ವೈರಿ ಗಡಿವ್ಯಾಗ ||

ಉಗ್ಯಾನ ಉರಿ
ಉಗುಳ್ಯಾನ ಉರಿ
ಇವ ದೈತ್ಯಮಾರಿ
ಮೋಸಕೃತ್ಯ ಗುರಿ
ತರಿ, ಇವನ ತರಿ–ಕೇಳಿ ರಣಭೇರಿ
ಯುದ್ಧ ರಂಗಕೆ ಸಾರಿ
ಮಾಡು ಶತ್ರು ಸಂಹಾರಾ |
ಆಗಲಿ ದಿಗ್ಬಲಿಗಾಹಾರಾ ||
ಏರಿ ಬಂದಾನ ವೈರಿ ಗಡಿವ್ಯಾಗ ||

ಇಡಿ ಹಿಮಾಲಯುಕs ಉರಿ ಹಚ್ಯಾನ |
ಮಾನವತೆಯು ಎದೆಗೆ ಮೋಸ ಚುಚ್ಯಾನ
ಶಾಂತಿ ಪ್ರೀತಿ ನೀತಿಗೆ ಕಣ್ಣ ಮುಚ್ಯಾನ
ಸತ್ಯ ಅಂಬೋದರ ವ್ಯಾಲ ಮುಳ್ಳ ಹೊಚ್ಯಾನ
ಹಿಂದಿನ ಒಗೆತನ ಕೊಂದುs |
ಹಗೆತನ ನಡಸ್ಯಾಕ |
ಏರಿ ಬಂದಾನ ವೈರಿ ಗಡಿವ್ಯಾಗ ||

ಇವ ದೈತ್ಯ ಚೀನಾಸುರ
ಕೊಬ್ಬಿ ಬೆಳೆದ ಮಹಿಷಾಸುರ
ರೊಚ್ಚಿಗೆದ್ದsದ ಇವನ ಆಕ್ರಮಣಾಕ

ಇಡಿಗೆ ಇಡಿ ಮಾನವ ಕುಲ
ಕೇಳಿ ರಣಭೇರಿ–ಸಾರು ಯುದ್ಧರಂಗಕ್ಕs।
ಏರಿ ಬಂದಾನ ವೈರಿ ಗಡಿವ್ಯಾಗ ॥

ಭಾರತದ ನದೀ ಬೆಟ್ಟ
ಕೊಳ್ಳಘಟ್ಟ ಕರದಾವೊ।
ಎಡಬಲದ ಕಡಲ ಜೋಡಿ
ಮಹಾಸಾಗರ-ಕೂಡಿ ಮೊರೆದಾವೊ ॥

ವಿಂಧ್ಯಾದ್ರಿ ಸಹ್ಯಾದ್ರಿ
ಹೊಡೆದು ರಣಭೇರಿ ಮೊಳಗ್ಯಾವೊ
ಹಿಮಾಲಯದಂಥ ಹಿಮಾಲಯ
ವೈಕೊಡಹಿ ನಿಂತು ಗುಡಗ್ಯಾದೋ—
ಭಾರತದ ಚೇತನಕೆ
ಶೌರ್ಯ ಕೇತನಕೆ ಗುಡಗ್ಯಾವೊ—
ಏರಿ ಬಂದಾನ ವೈರಿ ಗಡಿವ್ಯಾಗ

ಏಳು, ಎದ್ದೇಳು, ಏಳು
ವಿದ್ರೋಹಿ ಶತ್ರುವನು
ಹೊಡೆದೋಡಿಸಲು ಏಳು ॥

ಬಂದರs ಬರಲಿ ಪ್ರಳಯ
ಬಗ್ಗದೀ ಕಲಿ ಬಾಳು
ನೆತ್ತರ ಸುರಿಸಿ ಹತ್ತಿದ ಉರಿಯ
ನಂದಿಸಲು ಹೋರು ॥

**ಚಂಡಿ–ಚಾಮುಂಡಿ ಆಗಿ ತಾಯಿ**
**ರಣಚಂಡಿ ಹೇಳತಾಳ ಕೇಳು—**

**ಭಾರತದ ನೆಲದಿಂದ ವೈರಿ ಓಡುವವರೆಗೆ**
**ಇಲ್ಲ ಶಾಂತಿ ನನಗ– ।**
**ಬೇಡ ವಿಶ್ರಾಂತಿ ನಿನಗ**
**ಬೇಡ ವಿಶ್ರಾಂತಿ ನಿನಗs**

ಏರಿ ಬಂದಾನ ವೈರಿ ಗಡಿವ್ಯಾಗ

ಏಳು ಭಾರತ ವೀರ
ಕೇಳಿ ರಣಭೇರಿ । ಯುದ್ಧರಂಗಕೆ ಸಾರಿ
ಮಾಡೊ ಶತ್ರುಸಂಹಾರಾ ।
ಆಗಲಿ ದಿಗ್ಬಲಿಗಾಹಾರಾ ॥—
ರಣಚಂಡಿ ಆ ತಾಯಿಗೆ
ನಮಿಸಿ ಮುನ್ನಡೆಯೊ
ವೈರಿಯನು ಬಗ್ಗು ಬಡಿಯಾಕ ।
ಏರಿ ಬಂದಾನ ವೈರಿ ಗಡಿವ್ಯಾಗ ॥

— **ರಾಘವೇಂದ್ರ ಇಟಗಿ**

# ಕರೆಯು ಬಂದಿದೆ ಮನೆಯ ಬಾಗಿಲವರೆಗೆ

ಏಳು ತರುಣ ಬಾಂಧವ
ಕೇಳು ವೀರ ಬಾಂಧವ ||

೧

ಕರೆಯು ಬಂದಿದೆ ಮನೆಯ ಬಾಗಿಲವರೆಗೆ
ಏಳು ತರುಣ ಬಾಂಧವ
ಪುರುಷಾರ್ಥಸಮಯದ ಕರೆಯು ಇದು
ಕೇಳು ವೀರ ಬಾಂಧವ ||
ಏಳು ತರುಣ ಬಾಂಧವ....

೨

ಹಿಮಶೈಲದ ಅಡಿಯ ಗುಂಟ
ಆಕ್ರಮಣವ ನಡೆಸಲು
ಗಡಿಯ ಮೀರಿ ನುಗ್ಗಿ ಬಂದ
ಶತ್ರುಪಡೆಯ ಸದೆಯಲು ||
ಏಳು ತರುಣ ಬಾಂಧವ....

೩

ಮಾತೃಭೂಮಿ ರಕ್ಷೆಗಾಗಿ
ಏಳು ತರುಣ ಹೋರಲು
ರಾಷ್ಟ್ರಮಾತೆ ಸೇವೆಗಾಗಿ
ಸರ್ವಾರ್ಪಣವೆನ್ನಲು ||
ಏಳು ತರುಣ ಬಾಂಧವ....

೪

ಬಂಧುವೆಂದು ಮಿತ್ರನೆಂದು
ನಟಿಸಿ ಕೊರಳ ಕುಯ್ಯುವ
ಶತ್ರುವನ್ನು ಸದೆಯಲೆಂದು
ಏಳು ತರುಣ ಬಾಂಧವ ||

ಏಳು ತರುಣ ಬಾಂಧವ....

೫

ಕಲ್ಲು ಕರಗಿ ಹರಿಯುವಂಥ
ಮಣ್ಣು ಚಿನ್ನವಾಗುವಂಥ
ಶೌರ್ಯ ವಜ್ರವಾಗುವಂಥ
ಅಪೂರ್ವ ಸಮಯದ ಕರೆಯು ಇದು ||

ಏಳು ತರುಣ ಬಾಂಧವ....

೬

ಇದೊ ಕೇಳು ಪುರುಷಾರ್ಥದ ಸದ್ದು
ಅಗ್ನಿದಿವ್ಯ ತಾಗಿದ ಸಿಡಿಮದ್ದು !
ದೃಢನಿಶ್ಚಯ, ಶ್ರದ್ಧೆ ! ಧೈರ್ಯ—
ತಾಳಿ, ಏಳು, ಕೇಳಿ ಕರೆಯ ||

ಏಳು ತರುಣ ಬಾಂಧವ....

೭

ಕೊಡಹಿ ತನ್ನ ಧೀರ ಮೌನ
ಗುಡುಗಿರಿ ಈ ಹಿಮಶ್ಶೈಲ !

ದಿಕ್ತಟಗಳ ಸೀಳಿ ಸೂಸಿ
ಪಡಿನುಡಿದಿರೆ ಬಾನ್ನೆಲ ||

ಏಳು ತರುಣ ಬಾಂಧವ....

೮

ತ್ಯಾಗ ದುಡಿಮೆ ಗಳಿಕೆಗಳನು
ಮಾತೃಭೂಮಿಯಿತ್ತ ಕರೆಗೆ
ಸಲಿಸಲೆಂದು ಸಿದ್ಧಗೊಳಿಸು
ಏಳು ತರುಣ ಬಾಂಧವ ||

ಏಳು ತರುಣ ಬಾಂಧವ....

೯

ಯುಗ ಯುಗ ಯುಗ ಕಾದರೂ
ಬಾರದಂಥ ಕರೆಯಿದು
ಭರತವರ್ಷ ವಿಜಯಕಾಗಿ
ತಾಯಿಯಿತ್ತ ಕರೆಯಿದು ||

ಏಳು ತರುಣ ಬಾಂಧವ....

೧೦

ಸ್ನೇಹ ಹಸ್ತ ನೀಡಿದವರ
ಬೆನ್ನ ಹಿಂದೆ ಚೂರಿ ಇರಿವ
ಕ್ರೂರ ಶತ್ರುಗಳನು ತರಿಯೆ
ವೀರರೆಲ್ಲ ಬನ್ನಿರೆನುವ ಕರೆಯು ಇದು ||

ಏಳು ತರುಣ ಬಾಂಧವ....

೧೧

ರಕ್ತ ರಕ್ತ ರಕ್ತವೆಂದು
ಚಿನ್ನ ಚಿನ್ನ ಚಿನ್ನವೆಂದು
ದುಡಿಮೆ—ಗಳಿಕೆ ಧನವು ಎಂದು
ತ್ಯಾಗ ಕೇಳುತಿಹಳು ತಾಯಿ ಇಂದು ||
ಏಳು ತರುಣ ಬಾಂಧವ....

೧೨

ಕರೆಯು ಬಂದಿದೆ ಮನೆಯ ಬಾಗಿಲವರೆಗೆ
ಏಳು ತರುಣ ಬಾಂಧವ !
ಪುರುಷಾರ್ಥ ಸಮಯದ ಕರೆಯು ಇದು
ಕೇಳು ವೀರ ಬಾಂಧವ ||
ಏಳು ತರುಣ ಬಾಂಧವ....

— ರಾಘವೇಂದ್ರ ಇಟಗಿ

# ಏಳಿ ತರುಣ ವೃಂದವೆ!

ಏಳಿ ತರುಣ ವೃಂದವೆ,
ವೀರಯೋಗ ಸಿಂಧುವೆ!

ಗೌರಿ ಶಿಖರ ಬಾಗುವಲ್ಲಿ
ಬ್ರಹ್ಮಪುತ್ರೆ ಕುದಿಯುವಲ್ಲಿ
ತಪಸ್ವಿಗಳ ಓಂಕಾರ
ಹೂಂಕಾರ ಆಗುವಲ್ಲಿ
ಏಳಿ ತರುಣ ವೃಂದವೆ
ಸಮರ ಸಿಂಹ ಬಂಧುವೆ!

ರಕ್ತ ರಕ್ತ ಬೆರೆಯುವಲ್ಲಿ
ಎದೆಗೆ ಎದೆಯು ತಿವಿಯುವಲ್ಲಿ
ಹೃದಯ ಚಲುಮೆ ಚಿಮ್ಮುವಲ್ಲಿ
ನಾಕನರಕ ಕೂಡುವಲ್ಲಿ
ಏಳಿ ತರುಣ ವೃಂದವೆ
ಆತ್ಮಸಮರ ಸಂಗವೆ!

ಗುಂಡು ಗುಂಡು ಗುಡುಗುವಲ್ಲಿ
ವಿಮಾನಗಳು ಮೊಳಗುವಲ್ಲಿ
ವಂಚಕರ ಕೈಗೆ ಸಿಕ್ಕು
ಪಂಚಶೀಲ ನರಳುವಲ್ಲಿ
ಏಳಿ ತರುಣ ವೃಂದವೆ
ವೀರ ರಸದ ಕುಲುಮೆಯೆ!

ಬಾನು ಮೋರೆ ಕೆಂಪು ಬಣ್ಣ
ನೆಲದ ಬಸಿರೊಳೆಂಥ ಸುಣ್ಣ
ಸಿಂಹ ರೌದ್ರ ತಳೆಯುವಲ್ಲಿ
ನೂರು ಕದನ ಕವಿಯುವಲ್ಲಿ
ಏಳಿ ತರುಣ ವೃಂದವೆ
ಭರತ ಬುವಿಯ ಶೌರ್ಯವೆ !

ನೆಲದ ಹೊಟ್ಟೆ ಬಿರಿಯುವಲ್ಲಿ
ಸುತ್ತ ಸಾವು ಸುತ್ತುವಲ್ಲಿ
ಹಿಮದ ಬಂಡೆ ಬಿರಿಯುವಲ್ಲಿ
ಮುಂಡೆಯೂರಿ ನಡೆಯುವಲ್ಲಿ
ಏಳಿ ತರುಣ ವೃಂದವೆ
ಜಯದ ಠೇಂಕಾರವೆ !

ದೈವದ್ರೋಹಿ ಕುಣಿಯುವಲ್ಲಿ
ದೇಶ ಭಕ್ತ ಮಣಿಯುವಲ್ಲಿ
ಮೀಸೆ ಹೊತ್ತ ಗಂಡುಸಾಗಿ,
ಸೋತು ಕನಸ ಕಾಂಬುದೇಕೆ ?
ಏಳಿ ತರುಣ ವೃಂದವೆ
ಮಲಗಿರುವದು ಚಂದವೆ !

ಮಾತೃಭೂಮಿ ಮಿಡುಕುವಲ್ಲಿ
ನಿತ್ಯ ಸಮರ ಭೇರಿಯಲ್ಲಿ
ದೇಶ ಭಕ್ತಿ ಪುಟಿಯುವಲ್ಲಿ
ಮಾಯೆ ಬೆನ್ನು ತಟ್ಟಿದಲ್ಲಿ
ಏಳಿ ತರುಣ ವೃಂದವೆ
ಆಪತ್ತಿನ ಬಂಧುವೆ !

ಸುತ್ತ ಹುಳಗಳೆಲ್ಲ ಸುಟ್ಟು
ಹುತ್ತು ಮತ್ತೆ ಬೆಳೆಯದಂತೆ
ಕಟ್ಟು ಟೊಂಕ ಅಮರ ಸಿರಿಗೆ
ಹುಟ್ಟು ಸಾವು ಒಂದೆ ಎಂದು
ಏಳಿ ತರುಣ ವೃಂದವೆ
ವೀರ ರಸದ ರಂಗವೆ !

— ಸೋಮಶೇಖರ ಇಮ್ರಾಪೂರ

# ಭಾರತಿಗೆ ಜಯ ತಿಲಕ !

ಸೋಮಾರಿ, ಭೀಮಾರಿ, ಥೂ ಹೇಡಿ ಎದ್ದೇಳು
ಭಾರತಿಯ ಗರ್ಭದಲಿ ಬಂದೆಯೇಕೆ ?
ಮನೆಯೆಲ್ಲಾ ಉರಿ ತುಂಬಿ, ತೊಲೆಯೆಲ್ಲಾ ಜೋಲಾಗೆ
ಗೊರಕೆ ಹೊಡೆಯುವ ನಿದ್ರೆ ಹತ್ತಬೇಕೆ ?

ಸುಣ್ಣವನೆ ಬಾಯ್ಗಿಡಲು, ಬೆಣ್ಣೆಂಬ ಸೊನಿಗೇಡಿ,
ಮುಳ್ಳಿನಲಿ ಸೌರಭವ ಹುಡುಕಬೇಡ
ತಾಸುತಾಸಿಗೆ ತಿಂದು, ಪುಷ್ಟಕಾಯವ ಬೆಳೆಸಿ,
ಗೂಳಿ ಶಕ್ತಿಯ ಹಾಳುಗೆಡುಹಬೇಡ.

ಹಿತ್ತಲದ ಬೂರಲಕೆ ಜೋತು ಬಿದ್ದಿವೆ ಮಂಗ,
ಆಚೆಮನೆ ಡೋಲು ತಾ ಸಂಗ–ನಿಂಗಾ,
ಕೈಯ ಕುಡಗೋಲಿಂದ, ಕುಳಿತಟೊಂಗೆಗೆ ಹೊಡೆತ,
ಅಂತೆಯೇ ಅದು ಹುಚ್ಚು ಕೆಂಪು ಮಂಗ

ಮಾಣಿಕದ ಬದಲಾಗಿ ಬಂದೂಕು ಹಿಡಿಯುವದೆ ?
ಎಲ್ಲಿ ಏರುವದೇನೊ ಯಮುನ ಶಯ್ಯೆ !
ಅತಿಯಾಸೆ ಗತಿಗೆಡಿಸೆ, ಬಿಲ್ಲುದಾರವ ಹರಿದು,
ತೋಳ ಸತ್ತಿತು–ತನ್ನ ಹುಚ್ಚುತನಕೆ.

ಇತ್ತ ಗಡ್ಡದನಾಯಿ ಗುಡ್ಡಕ್ಕೆ ಬೊಗಳುತಿದೆ
ಏಕೆ ಬಣ್ಣದಕೋಲು ? ಬೇಡ ದಂಡು
ಬೋಧಿ ವೃಕ್ಷದಹಣ್ಣು ಸಿಹಿಯೆಂದು ಹಿಗ್ಗುತಿಹ,
ಹಳದಿ ಮಂಗಕೆ ಸಾಕು ಒಂದೆ ಗುಂಡು

ಮನೆಯ ಇಲಿಗಳ ಮೇಲೆ ಅಷ್ಟೇಕೆ ಕಡುಕೋಪ,
'ಉಗುರಿಲ್ಲವೆ ನಿನಗೆ, ಕೊಡಲಿಯೇಕೆ ?'
ಪುಡಿಹಾಕಿ ಕೊಲ್ಲೋಣ ಅದಕೇಕೆ ಸಿಡಿಬಾಂಬು ?
ಮನೆಯ ಮೇಲಿವೆ ಮಂಗ–ಕುಳಿತೆಯೇಕೆ ?

ಮನೆಗೆ ಬಂದಿದೆ ಯುದ್ಧ-ರಕ್ತದಾನಕೆ ಸಿದ್ಧ-
ನಾಯಿ ಮಂಗನ ಬೆದರಿಗಂಜಬೇಡ !
ಬೆನ್ನ ಏರಲಿ ಕೋವಿ ಭಾರತಿಗೆ ಜಯ ತಿಲಕ–
—ವಿಡುವ ಕೆಚ್ಚೆದೆಗಂತೂ ಶಂಕೆ ಬೇಡ.

— ಸೋಮಶೇಖರ ಇಮ್ರಾಪೂರ

# ಸಮರಭೇರಿ !



(ಲಾವಣಿ ನಡಿಗೆ)

೧

ಟೊಂಕ ಕಟ್ಟಿರಿ ನಾಡ ಬಂಟರೆಲ್ಲ
ಬೆಂಕಿ ಬಿದ್ದಿತವ್ಮನ ಮನೆಗೆ
ಹೊತ್ತಿ ಉರಿಯುತಿದೆ ಉತ್ತರ ಗಡಿಯಲಿ
ಹೆತ್ತವ್ಮನ ಮನೆ ಈ ಗಳಿಗೆ
ವಿಶ್ವದ ಮಳಿಗೆ !

೨

ಶಾಂತಿ ಶುಭ್ರ ಗಂಭೀರ ರಜತಗಿರಿ
ನಮ್ಮ ಹಿಮಾಚಲದುತ್ತರಕೆ
ಕ್ರಾಂತಿ ಕುದಿಯುತಿದೆ ರಕ್ತ ಸುರಿಯುತಿದೆ
ಭ್ರಾಂತರಾಗದಿರಿ ಬಾಂಧವರೆ
ಮನನೊಂದವರೆ !

೩

ಕೋಟಿ ಕೋಟಿ ಬಾಂಧವರ ಎದೆಗಳಲಿ
ಚಿಮ್ಮುತಲಿದೆ ಬಿಸಿನೆತ್ತರವು
ಉರಿಯನು ನೊಂದಿಸಿ ವೈರಿಯ ನೋಣೆಯಲು
ಉಕ್ಕುತಲಿದೆ ಮನದುತ್ಸಾಹ
ಐಕ್ಯದ ಭಾವ !

೪

ನೆಚ್ಚಿದವರ ಎದೆಗಿರಿಯುವ ರಕ್ಕಸ
ನೀತಿಗೆ ಚೀನವೆ ನಿದರ್ಶನ
ನೀಚತನದಿ ನಿಷ್ಕಾರಣವಾಗಿಯೆ
ನಡೆದಿದೆ ಇಂದಿನ ಆಕ್ರಮಣ
ಭೂ ವಿಸ್ತರಣ !

೫

ಬೊಗಳುತ ಬರುವುದು ತೆಗಳುತ ಸರಿವುದು
ಹಳದಿಯ ನಾಯಿಯ ಹೀನಗುಣ
ಕೊಬ್ಬಿದ ಕೋಣವು ತೊತ್ತಳದುಳಿದಿದೆ
ಶಿವನ ನಿಕೇತನ ನಮ್ಮಮನ
ಶಾಂತಿವನ !

೬

ಭಾರತ ಜನಶಂಕರಿಯು ಕೆರಳಿದರೆ
ಬೀಸುವದದೊ ಝುಂಝಾವಾತ
ರುದ್ರ ತಾಂಡವಕೆ ವೈರಿ ತಂಡದಲಿ
ಎತ್ತೆತ್ತಲೂ ಹೆಣಗಳ ನಾತ
ಚೀನದ ಪ್ರೇತ !

೭

ಸ್ವಾತಂತ್ರ್ಯಕೆ ಗಂಡಾಂತರ ಬಂದಿರೆ
ಬಾಳುವದೇತಕೆ ಎಲೆಜೀವ !
ಸ್ವಾತಂತ್ರ್ಯವೆ ಸ್ವರ್ಗವು ತಾಯ್ನಾಡಿಗೆ
ಇನ್ನೇತಕೆ ನಡೆ ಸಂದೇಹ
ಬಿಡುಬಿಡು ಮೋಹ !

೮

ನಾಡು ಬದುಕಿದರೆ ನಾವು ಬದುಕುವದು
ಸ್ವಾತಂತ್ರ್ಯವೆ ನಾಡಿನ ಪ್ರಾಣ
ಪೌರುಷ ಚೇತನ ಭಾರತ ಕೇತನ
ಹಾರಾಡಲಿ ಅದು ಚಿರಂತನ
ಅಭಿಮಾನಧನ !

೯

ನಾಡಿನರಕ್ಷಣೆ ನಮ್ಮಿಂದಿನ ಹೊಣೆ
ನಮ್ಮ ಜವಾನರಿಗಾಹ್ವಾನ !
ನಾಳಿನ ಪೀಳಿಗೆ ಶಪಿಸದೆ ನಮ್ಮನು ?
ಕಂಕಣ ಕಟ್ಟಿರಿ ಇದೇಚಣ
ಪ್ರಾಣಗಳೇ ಪಣ !

೧೦

ತ್ಯಾಗ ಸೇವೆಗಳೆ ಸಿದ್ಧಿಗೆ ಸಾಧನ
ಸಿದ್ಧಿಗೆ ಪೌರುಷ ಮೂಲಧನ
ಪೌರುಷ ಪೂಜೆಯೆ ನಾಡಿನ ಚೇತನ
ಅಜೇಯವಾಗಲಿ ಗಂಡುತನ
ಅದು ನಮ್ಮತನ !

೧೧

ಧರ್ಮಯುದ್ಧದ ಯಜ್ಞಕುಂಡದಲಿ
ರಕ್ತ ತರ್ಪಣಕೆ ಎದ್ದೇಳಿ

ದುಷ್ಟ ಮರ್ದನಕೆ ಶಿಷ್ಟ ರಕ್ಷಣೆಗೆ
ನಿಷ್ಠುರ ನಿರ್ಧಾರವ ತಾಳಿ
ಕೂಗಲಿ ಕಾಳಿ !

೧೨

ಪುಣ್ಯಭೂಮಿ ಭಾರತದ ರಕ್ಷಣೆಗೆ
ಬದ್ಧ ಕಂಕಣವು ನಮ್ಮ ಜನ
ಅನ್ಯಾಯ ದರ್ಪಗಳ ಹುಟ್ಟಡಗಿಸಲು
ಕೆಂಡಕಾರುತಿದೆ ತರುಣಗಣ
ದೇಶದ ಮಾನ !

೧೩

ನನ್ನದು ನಿನ್ನದು ಎನ್ನುವ ಸೊಲ್ಲದು
ಸಲ್ಲದು ಇಂದಿನ ಸಮಯದಲಿ
ತನ್ನದೆಲ್ಲವನು ತಾಯಿಗೆ ನೀಡಿ
ಸಿಡಿದೇಳಲಿ ರಾಷ್ಟ್ರದ ಪುರುಷ
ನಾಡಿಗೆ ಹರುಷ !

೧೪

ಕಲಿ ಕೋವಿದ ಕವಿ ಕಾರ್ಮಿಕರೆಲ್ಲ
ಎದ್ದೇಳಲಿ ಶ್ರಮದಾನಕ್ಕೆ
ಛಲವಿರೆ ಎದೆಯಲಿ ಬಲವಿರೆ ಬೆನ್ನಲಿ
ಅಂತಿಮ ವಿಜಯವು ನಮಗಕ್ಕೆ
ನಿರ್ಧಾರಕ್ಕೆ !

೧೫

ಹಗಲಿರುಳೆನ್ನದೆ ತಿರುಗಲಿ ಯಂತ್ರ
ಹೆಚ್ಚಳವಾಗಲಿ ಉದ್ಯಮಿಕೆ
ಮನೆಮನೆಗಳಲಿ ಮನಮನಗಳಲಿ
ಸಾಗಲಿ ಸಿದ್ಧತೆ ದಿನದಿನಕೆ
ರಣರಂಗಕ್ಕೆ !

೧೬

ಯೋಧರ ಮುಷ್ಟಿಗೆ ಪುಷ್ಟಿಯನೀಯಲು
ಸರ್ವಾರ್ಪಣವೇ ನಮ್ಮ ಪಣ !
ಭಾರತ ವೀರರ ವಿರಾಟದರ್ಶನ–
ವಾಗಲಿ ಕಣದಲಿ ಇದೇಕ್ಷಣ !
ಇದು ಸುಲಕ್ಷಣ !

೧೭

ದ್ವೇಷವ ಮರೆದು ತ್ವೇಷವ ತೊರೆದು
ಒಂದಾಗಿರಿ ಬಾಂಧವರೆಲ್ಲ
ಎಲ್ಲಿಯೆಯಿರಲಿ ಎಂತಯೆಯಿರಲಿ
ಭಾರತ ಪುತ್ರರು ನಾವೆಲ್ಲ
ಬಲ್ಲಿದರೆಲ್ಲ !

೧೮

ಕೇಳಿ ಬಂಟರೆಲ್ಲ ನಾಡಿನ ಡಂಗುರ !
ಏಳಿರಿ ಸ್ವಾರ್ಥವ ಬದಿಗಿಟ್ಟು
ಮಾಡಿ ಮಡಿವುದೆ ನಾಡ ನೆಮ್ಮದಿಗೆ
ಜೀವನ ಸಾಫಲ್ಯದ ಗುಟ್ಟು
ಬಾ ನಡಕಟ್ಟು !

೧೯

ಹಿರಿಯು ಭಾಗ್ಯವಾಡಿ ಬಸವ ತನಯನ
ಹಾಡಿದು ನಾಡಿಗೆ ಅರ್ಪಣವು !
ನೆತ್ತರ ಕೊಡುಗೆಯು ನೀಡಿದ ಕಿತ್ತೂರ
ರಾಣಿಯು ಕೀರ್ತಿಗೆ ದರ್ಪಣವು !
ಸಂತರ್ಪಣವು !

— ಎಸ್. ಡಿ. ಇಂಚಲ

# ಇತಿಹಾಸ

ರಾವಣಾಸುರ ಬಂದ
ರಾವಣಾಸುರ ಹೋದ
ಮಣ್ಣು ಮುಕ್ಕಿ
ಹತ್ತು ತಲೆಗಳ ಹತ್ತು ದಿವಸಗಳ ಉರುವಣಿಗೆ
ಕುರುಡು ದುರಹಂಕಾರದುನ್ಮತ್ತ ಮೆರವಣಿಗೆ
ಕಣ್ಣು ಕುಕ್ಕಿ
ಹಾಳಾಗಿ ಹೋದನವ ಒಬ್ಬನೇ ಅಲ್ಲ
ಮಣ್ಣುಗೂಡಿದರವನ ಬೆಂಬಲಿಗರೆಲ್ಲ

ದುರ್ಯೋಧನನು ಬಂದ
ದುರ್ಯೋಧನನು ಹೋದ
ಮಣ್ಣು ಮುಕ್ಕಿ
ನೂರು ತಲೆಗಳ ನೂರು ದಿವಸಗಳ ಉರವಣಿಗೆ
ಕುರುಡು ರಾಜ್ಯ ಪಿಪಾಸೆಯುನ್ಮತ್ತ ಮೆರವಣಿಗೆ
ಕಣ್ಣು ಕುಕ್ಕಿ
ಹಾಳಾಗಿ ಹೋದನವ ಒಬ್ಬನೇ ಅಲ್ಲ
ಮಣ್ಣುಗೂಡಿದರವನ ಬೆಂಬಲಿಗರೆಲ್ಲ

ಈಗ ಮಾವೊ ಬಂದ
ಹಿಮಗಿರಿಯ ಗಡಿಯಿಂದ
ಕಣ್ಣು ಕುಕ್ಕಿ
ಎಪ್ಪತ್ತು ಕೋಟಿ ಹುಳ ಹೆಗ್ಗಣಗಳುರವಣಿಗೆ
ಎಷ್ಟು ದಿನ ನಡೆದೀತು ಈ ಕುರುಡು ಮೆರವಣಿಗೆ ?
ಮಣ್ಣು ಮುಕ್ಕಿ

ಹಾಳಾಗಿ ಹೋಗುವವನು ಒಬ್ಬನೇ ಅಲ್ಲ
ಮಣ್ಣು ಗೂಡುವರಿವನ ಬೆಂಬಲಿಗರೆಲ್ಲ

ಲೋಕ ಕಂಟಕರ ಇತಿಹಾಸ ಹೀಗುಂಟು
ಬರುವಾಗ ನುಗ್ಗುವರು ಕಣ್ಣು ಕುಕ್ಕಿ
ಹಾಳಾಗಿ ಹೋಗುವರು ಮಣ್ಣುಮುಕ್ಕಿ
ಇದು ಕಟ್ಟಿಟ್ಟ ಗಂಟು.

— ಸು. ರಂ. ಎಕ್ಕುಂಡಿ

# ಪ್ರತಿಜ್ಞೆ

ಲದ್ದಾಖ ಇರಲಿ ನೀಫಾ ಇರಲಿ
ಒಂದಂಗುಲ ನೆಲ ಬಿಡಲಾರೆವು
ಚೀಣೀಯರ ಹೊಡೆದಟ್ಟುವವರೆಗೂ
ಕೋವಿಯ ಬದಿಗಿಡಲಾರೆವು

ಲದ್ದಾಖ ಇರಲಿ ನೀಫಾ ಇರಲಿ
ಒಂದಂಗುಲ ನೆಲ ಬಿಡಲಾರೆವು
ಮಿತ್ರದ್ರೋಹಿಯ ಮೆಟ್ಟುವವರೆಗೂ
ಕೋವಿಯ ಬದಿಗಿಡಲಾರೆವು

ಲದ್ದಾಖ ಇರಲಿ ನೀಫಾ ಇರಲಿ
ಒಂದಂಗುಲ ನೆಲ ಬಿಡಲಾರೆವು
ಸಿಂಹಧ್ವಜ ಗುರಿ ಮುಟ್ಟುವವರೆಗೂ
ಕೋವಿಯ ಬದಿಗಿಡಲಾರೆವು

ಏನೇ ಬರಲಿ ಹಾಗೇ ಇರಲಿ
ಒಂದಂಗುಲ ನೆಲ ಬಿಡಲಾರೆವು
ಸೋದರ ಯೋಧರಿಗೊಡ್ಡಿದ ಸಾವು
ಸೇಡನು ತೀರಿಸಿಕೊಳ್ಳುವೆವಾವು
ಹುತ್ತವ ಹೊಕ್ಕೇ ಹೊಡೆವೆವು ಹಾವು
ಕೋವಿಯ ಬದಿಗಿಡಲಾರೆವು

— ಸು. ರಂ. ಎಕ್ಕುಂಡಿ

## ಪಾಂಚಜನ್ಯ

ಕೇಳಿರಿ ಕೇಳಿರಿ
ಪಾಂಚಜನ್ಯ ಊದುತಿರುವ
ನಿಂದು ಪಾರ್ಥ ಸಾರಥಿ
ವಿಜಯರಥ ಧ್ವಜದಮೇಲೆ
ಕುಳಿತ ವೀರ ಮಾರುತಿ
ಪ್ರಾಣ ಪ್ರಣತಿ ಬೆಳಗುತಿಹವು
ಜಯದ ಮಂಗಳಾರತಿ
ಧೀರ ಹೃದಯದಲ್ಲಿ ಉದಯ
ಅಗ್ನಿ ಕನ್ಯೆ ಭಾರತಿ

ಏಳಿರಿ. ಏಳಿರಿ.
ಕೈಗೆ ಸಿಕ್ಕ ಕೈದುವೆತ್ತಿ
ರಣಕೆ ನುಗ್ಗಿ ನಡೆಯಿರಿ
ಹಗೆಯ ಹುತ್ತದಲ್ಲಿ ಹೊಕ್ಕು
ಹೆಡೆಯ ತುಳಿದು ಹೊಡೆಯಿರಿ
ಬಿತ್ತುವಲ್ಲಿ ಬೆಳೆಯುವಲ್ಲಿ
ಒಂದಕೆರಡು ಪಡೆಯಿರಿ
ಕಾರಖಾನೆ ಗಿರಣಿಗಳಲಿ
ಹಗಲು ರಾತ್ರಿ ದುಡಿಯಿರಿ.

ಹೇಳಿರಿ. ಹೇಳಿರಿ.
ಗೆಲವು ನಮ್ಮ ಕಾಲುದಾರಿ
ವಜ್ರ ಕೈಯ ದಂಡವು
ಹಗೆಯು ಹೆಜ್ಜೆ ಇಟ್ಟಕಡೆಗೆ

ಮಾತೃಭೂಮಿ ಕೆಂಡವು
ಶಾಂತಿ ಶೀಲ ಸ್ನೇಹಶೀಲ
ಸತ್ಯಕವಚವೊಪ್ಪಲು
ಭೀಮ ಬಾಹುಗಳಿಗೆ ಚೀನ
ಯಾವಗಿಡದ ತೊಪ್ಪಲು?

—ಸು. ರಂ. ಎಕ್ಕುಂಡಿ

# ಜಯಭೇರಿ

ಜಯಹಿಂದದ ಜಯಭೇರಿ । ಜಯ ಹೊಂದುವ ಜಯಭೇರಿ
ಧರ್ಮದ ಜಯಭೇರಿ । ಕರ್ಮದ ರಣಭೇರಿ ॥ ಪ ॥

ಧಂಧಣ ಧಂಧಣ ಧನ್ಯ । ಭಾರತವು ಅನನ್ಯ ।
ಸೈ ಬ್ರಾಹ್ಮಕೆ ಸೈ ಕ್ಷಾತ್ರಕೆ । ಶ್ರೀ ಮಾತೆಯು ಸೈನ್ಯ ।
ಸಂಕ್ರಾಂತಿಯು ಬಂದಿದೆ । ಇಗೊ ಹಂದಿಯು ಬೆನ್ನೇರಿ ।
ಭಾರತ ಭೂಮಂಡಲಕೋ । ಶುಭಮಂಗಲ ಸಾರಿ ।
ಶೋಭನ ಕೈವಾರಿs । ಜಯಹಿಂದದಭೇರಿ
ಎಂದಿಗು ಜಯಭೇರಿ. ॥ ಅನುಪಲ್ಲವಿ ॥

ದಾನಕ್ಕೂ ಇದೆ ಹೊತ್ತು । ಸಂಧಾನಕು ಹೊತ್ತು
ಇದು ನನಗೂ ಗೊತ್ತು । ಇದು ನಿನಗೂ ಗೊತ್ತು
ಭೀಷ್ಮಾಷ್ಟಮಿ ಮುಂದೇ ಇದೆ
ಉತ್ತರಕೋ ಅದು ಕಾದಿದೆ

ಬದುಕಲು ಬಾರದ ಹೇಡಿಗೆ । ಬಾಳುವುದೇ ಕುತ್ತು ।
ಸಾವಿಗೆ ಹೆದರದ ವೀರಗೆ । ಬಾಳಮೃತದ ತುತ್ತು ।
ಬಿತ್ತೋ ಭಾರತ ಕ್ಷೇತ್ರವ । ಹರಗೋ ಕ್ರಮವಾಗಿ
ಹಣಿಸೊ ಉಣಿಸೋ ಹೊಲವನು । ಒಲವೇ ದ್ರವವಾಗಿ
ಜಯಹಿಂದದ ಭೇರಿ ॥ ೧ ॥

ಬೆಲ್ಲವು ಇಲ್ಲದ ಸ್ನೇಹಾ । ಅದು ಒಣಕಲು ದೇಹಾ ।
ಸಂಶಯ ಮಸಣವ ಹೊಕ್ಕಿದೆ । ಜೀವನ ಸಂದೇಹಾ ।
ಬರೆ ಎಳ್ಳಿಗೆ ಹೊತ್ತೇ ಇದು । ಸಾಕೋ ಬಾಯ್‌ಬೆಲ್ಲಾ.
ಭಾರತ ರಾಷ್ಟ್ರಕೆ ಬೇಕಿದೆ । ಜನ-ಮನ-ಧನವೆಲ್ಲಾ
ಅನ್ನವ ಬೆಳೆ, ಹಸಿವೆಯ ಕಳೆ । ಕೈಜೋಳಿಗೆ ಬೇಡ
ಉದ್ಯೋಗವು, ಸದ್ಯೋಗವು । ಧಿಕ್ ಧಿಕ್ ಜಡಮೂಢಾ ।

ಯೋಚನೆಯೂ ಯೋಚನೆಯೂ । ಒಡನೊಡನೆ ಯುದ್ಧ
ಶಾಂತಿಗೆ ಬದ್ಧವು ವೀರರ ಮರಣಕ್ಕೂ ಸಿದ್ಧ
ಜಯಹಿಂದದಭೇರಿ ॥ ೨ ॥

ಹದಿನಾಲ್ಕೂ ದೇಶಗಳು, ಹದಿನಾಲ್ಕೂ ಭಾಷೆ
ಹದಿನಾಲ್ಕೂ ವೇಷಗಳು, ಇದು ಅಲ್ಲ ತಮಾಷೆ
ಹದಿನೈದರ ಹುಣ್ಣಿವೆ ಇದೆ, ಹದಿನಾಲ್ಕೂ ಒಂದು
ಹದಿನಾರರ ಕಳೆ ಚಂದ್ರಗೆ, ಹದಿನೇಳರ ಸಂದು
ಹದಿನೆಂಟಕೆ ಜಯ, ಜಯಜಯ, ಜಯಭಾರತ ಬಂಧು
ಅಗೊ ಹಿಮನಗ ಉತ್ತರಕಿದೆ, 'ಇಗೊ ದಕ್ಷಿಣ ಸಿಂಧು' ।
ಎಣಿಸುವೆಯಾ ? ಗುಣಿಸುವೆಯಾ ? ಯೋಗೇಶ್ವರ ನೆನೆಸೊ
ಗಣಿತವು ಏತಕೆ ? ಪಾರ್ಥನ ಸಾರ್ಥಕ ಮರಿ ಎನಿಸೊ
ಜಯಹಿಂದದಭೇರಿ ॥ ೩ ॥

ಗಾಂಧಿಯ ಅಭಯದ ಶಸ್ತ್ರವು ಸಂಕ್ರಾಂತಿಯ ಕೈಗೆ
ಶ್ರೀ ಅರವಿಂದರ ಕವಚವು ಹಿಂದೀಯರ ಮೈಗೆ
ಠಾಕೂರರ ಜಯಕಾರವು ಭಾರತ ಸೌಭಾಗ್ಯ
ಟಿಳಕರ ಭಗವದ್ಗೀತೆಯು ವೀರನಿಗೇ ಯೋಗ್ಯ
ವಂದೇಮಾತರವೆಂಬುದು ಭಾರತ ಶ್ರೀಮಂತ್ರ
ದಿಗ್ದೇಶಕೆ ಗೊತ್ತಿರಲಿ ಭಾರತವು ಸ್ವತಂತ್ರ
ಸಾಧುವಿಗೇ ಸಾಧು ಇದು । ಮಧುವಿಗೆ ಮಾಧುರ್ಯ
ಕಲಿಗೋ ಕಲ್ಕಿಯ ಸೈನ್ಯವು । ಪ್ರತಿ ಸೂರ್ಯಗೆ ಸೂರ್ಯ ।
ಜಯಹಿಂದದ ಭೇರಿ ॥ ೪ ॥

ದುಡಿ ಎಂದರು । ದಣಿ ಎಂದರು 'ವಿಶ್ವೇಶ್ವರ' ಅಯ್ಯ ।
ಬಂಗಾರದ ಗಣಿ ಎಂದರು । ತಾ ಕೈಯೊಳು ಕೈಯ್ಯ ।
ಸಹರಕ್ಷಣೆ, ಸಹ ಭಕ್ಷಣೆ, ಸಹವೀರ್ಯದ ಕಾರ್ಯ ।
ಸುಡು ವೈರವ, ಹಿಡಿ ಧೈರ್ಯವ, ತೇಜಸ್ಸನಿವಾರ್ಯ ।

ಓಂ ಶಾಂತಿಃ ಓಂ ಶಾಂತಿಃ ಓಂ ಶಾಂತಿಃ ಎನ್ನು ।
ಅನುಸೂಯೆಗೆ ವೈತ್ರಿಯಃ ಇದೆ ಬದುಕಾಗಲಿ ಹೊನ್ನು ।
ಶಿಷ್ಟರನೋ ಕಾಯುವದಿದೆ ತಡೆ ಭಾರತವೀರ
ದುಷ್ಟರನೋ ಕೊಲ್ಲುವದಿದೆ ನಡೆಯೋ ರಣಧೀರ
ಜಯಹಿಂದದಭೇರಿ ॥ ೫ ॥

ಜಯ ದುರ್ಗಿಗೆ, ಜಯ ರೇಣುಕೆ, ಈ ಹರಕೆಯ ಹಾಕು ।
ಕುಕ್ಷಾತ್ರಕೆ ಜಮದಗ್ನಿಯ ಮಗ ರಾಮನು ಬೇಕು ।
ಜಯವಾಗಲಿ ಚಾಮುಂಡಿಗೆ, ವಿಜಯವು ಭಾರತ ದಂಡಿಗೆ
ಹೊಡಿ ಚಂಡಗೆ ಹೊಡಿ ಮುಂಡಗೆ ಜಯ ಶರಭಕೆ ಭೇರುಂಡಕೆ
ಮಾನವನಿಗೆ ಮಾನವನೋ ಕೊಡುವವ ಹಿತ ಬಂಧು
ದಾನವನಿಗೆ ಭಾರತವಿದು ರಣಭೈರವ ಸಿಂಧು
ಭಾರತವಿದು ಒಂದು, ಕರ್ನಾಟಕ ಒಂದು.
ಭೂಮಂಡಲ ಬಾಂಧವ್ಯಕೆ ನಾವೆಲ್ಲರು ಮುಂದು :
ಜಯಹಿಂದದಭೇರಿ ॥ ೬ ॥

— ಅಂಬಿಕಾತನಯದತ್ತ.

## ಅರ್ಜಿ ಕೇಳಿಕೊಂಡು ಮರ್ಜಿ ಮಾಡಬೇಕು

ಅರ್ಜಿ ಕೇಳಿಕೊಂಡು । ಮರ್ಜಿ ಮಾಡಬೇಕು ।
ಮಹಾರಾಜರ ಪ್ರಜಾಜನ ।
ಗೋಂದಾಜಿ ನಾಯಕನ ಹಾಡಿನ ನುಡಿ ನುಡಿ
ಶ್ರುತಿಗೆ ಖಡ್ಗದ ಖಣಾ ಖಣಾ ॥ ಪ ॥

ಯುಗ ಯುಗ ಕೇಳಿರಿ ಸತ್ಯ ಅಂತ ಹೇಳಿರಿ ।
ಪುರುಷಾರ್ಥ ಪುರಾಣ ಒಣಾ ಒಣಾ ।
ಕಣ್ಣೀರಿನಾಗ ತೊಯ್ದು ಸಣ್ಣ ಸುಖದ ಒಣಾತುಕಡಿ ।
ತಿಂತಾನ ತಾಳೀರಿ ಎಷ್ಟು ದಿನ ।
ಸತ್ತಾಂಗ ಬಾಳೀರಿ ಹ್ಯಾಂಗ ಜನ ॥

ಸತ್ರೋಜಿ ರಕ್ಷಿಸಿದ ಸತ್ತೀರಿ ಸಾತೇರಿ ।
ಪಾರ್ವತಿ ಆದಾಳಂತ ಮಾದೇವಿ ।
ಮಾದಾಯಿ ಅತ್ತಾಳು ವಂಶವು ಹಾಳಾಗಿ ।
ಸುಮತಿಯು ಸುಟ್ಟು ಭಸ್ಮ ಆದೇವಿ ॥

ದಾಸನಾಗಿದ್ದು ನಾನು ಕಂಡೇನಿ ನಾ ನಿಮ್ಮ ।
ಪುರುಷರ ಕೋಟಿ ಕೊತ್ತಳ ಅಳ್ಳ್ಯಾಡ್ಯಾವ ।
ಹುಲಿಗೆ ಅಂಜದ ವೀರರು ಇಲಿಗೆ ಬಾಗಿದಾರ ।
ಒಳ್ಳೊಳ್ಳೆವರ ಅಹಂಕಾರ ಉಳ್ಳ್ಯಾಡ್ಯಾವ ॥

ಯತ್ನ ಪ್ರಯತ್ನ ಆಗಿ ರತ್ನದ ಗಂಟು ಹೋಗಿ ।
ಖತನಟ್ಟು ಹೋಗೇದ ನಮ್ಮ ಹ್ಯಾಂವಾ ।
ಪುರುಷಾರ್ಥ ಳೊಳ್ಳೊಟ್ಟು ದೈವಾನ ಆತು ಖೊಟ್ಟಿ ।
ಸ್ವಾರ್ಥಕ್ಕ ನಮ್ಮ ಖಬರು ಹಾರ್ಯಾಡ್ಯಾವ ॥
ಖಡ್ಗ ಖಂಜಿರ ವರಿಗಂಡಾವ ಉಂಡಾವ ।
ಜಂಗೀನ ಮ್ಯಾಲ ಜಂಗ ಏರ್ಯಾಡ್ಯಾವ ॥

ಮಂಗಲ ಕಾಲ ಈಗ ಬಂದದ
ಇಂದss ಬಂದದ ।
ಹೊಸ ಹೊಸ ಸಡಗರ ಸಿಂಗಾರಕ
ಸಜ್ಜಾಗ್ರಿ ಸ್ವಾತಂತ್ರ ಬಂಗಾರಕ ।
ಬಂಗಾರಕ ಮತ್ತ ಸಿಂಗಾರಕ

ಶಾಂತಾ ನಮ್ಮ ದೇವಿ ದುರ್ಗಾ ಆಗ್ಯಾಳ ಆಗಿ ।
ದೀನ ದುಃಖಿತರ ಧ್ವನಿ ಸ್ವರಶಾ ।
ಎದ್ದಿಯೋ ನನ್ನ ತಮ್ಮ ನಿದ್ದೀಯ ಮಾಡಬೇಡ ।
ಗೆದ್ದು ಬರಬೇಕ ನಾವು ಇದ ವರಸಾ ।
ಹೊಟ್ಟೆ ಬಟ್ಟೆ ವ್ಯಾರಿ ಬಿಟ್ಟು ಕೊಟ್ಟು ನಾ ।
ಬಂದೇನಿ ಹಾಡಾಂವಾ ಆಗಿ ಹರಸಾ ॥

— ಅಂಬಿಕಾತನಯದತ್ತ

# ಇಂದೆ ಸೀಮೋಲ್ಲಂಘನ

ಯುದ್ಧ ಬಂದಿತು ಸಿದ್ಧರಾಗಿರಿ
ಇಂದೆ ಸೀಮೋಲ್ಲಂಘನ !
ಪೂರ್ವ-ಪಶ್ಚಿಮ ದಕ್ಷಿಣೋತ್ತರ
ನೀಡಿ ಹಸ್ತಾಂದೋಲನ

'ಮಾಡು ಇಲ್ಲವೆ ಮಡಿಯಿರೆ'ನ್ನುತ
ಎಂತು ಬಿಡುಗಡೆ ಪಡೆದೆವು-
ನಾಡ ಕಟ್ಟುತ ಬೆವರು ಹರಿಯಿಸಿ
ದೂರ ಗುರಿಯೆಡೆ ನಡೆದೆವು-

ಬಂತು ಉತ್ತರದಿಂದ ಹತ್ತಿರ
ಹಳದಿ ಮಿಡಿತೆಯ ಹಾವಳಿ,
ಏಳಿ ಎಚ್ಚರಿ, ಬೆಂಕಿ ಹಚ್ಚಿರಿ
ತಿಂದು ದಕ್ಕಿಸಿಕೊಳ್ಳಲಿ

ದೂರದಿಕ್ಕಿನ ಅಂಚಿಗಿದೆ ಹೊಸ-
ಹೊಂಚು ಹಾಕಿದ ಚೇಡವು;
ಮಿಂಚುತಿದೆ ಆಗೀಗ, ಇರುಳಿಗೆ
ಏರಿ ಬರಲಿವೆ ಮೋಡವು.

ಇರುವೆಗುದ್ದನು ಮೆಟ್ಟಿ—ಮಾಳಿಗೆ
ಸೋರದಂತೆ ತಡೆಯಿರಿ.
ಆ ಹಿಮಾಲಯ ಕೋಟೆ ಬಾಗಿಲು—
—ಅಲ್ಲಿ ಬಾವುಟ ಹಿಡಿಯಿರಿ.

ನಮ್ಮ ನೆಲವಿದು ನಮ್ಮ ಹೊಲವಿದು-
ನಮ್ಮ ನೆತ್ತರು ಬಿಡುಗಡೆ

ನಮ್ಮ ತಾಯಿಯ ಪಾದಧೂಳಿಯು
ನಮ್ಮ ಪ್ರಾಣದ ನಿಲುಗಡೆ.

ಹಿಡಿದ ಕಾಯಕ ನಿಷ್ಠೆ ನಡತೆಗೆ
ಒಟ್ಟು ನಾಡಿನ ಒಕ್ಕಲು,
ಎಲ್ಲ ಶಕ್ತಿಯ ಝರಿ ತೊರೆಗಳಾ–
ಘಟಿಸಿ ಸಾಗರವುಕ್ಕಲು–

ಆಕ್ರಮಣ ! ವೈಸೊಕ್ಕು ಮುರಿಯಲು
ಒಕ್ಕೊರಲು ಒಂದಾಗಿರಿ;
ಕೊನೆಯ ರಕ್ತದ ಹನಿಯವರೆಗೂ
ಹೋರಿ ಗೆಲ್ಲುವೆವೆನ್ನಿರಿ.

ಶಿವನ ತಪಸಿಗೆ ಭಂಗಬಂದರೆ
ನವಕುಮಾರನ ಸಂಭವ;
ತಾರಕಾಸುರ ವಧೆಯು ಕಾದಿದೆ
ಭರತಕುಲ ವಿಜಯೀಭವ !

— ಚೆನ್ನವೀರ ಕಣವಿ

# ಬಂದೆವಿದೋ !

**ಭಾರತಮಾತೆ:—**

ಏನು ಕವಿದಿದೆ ಛಾಯೆ ಧವಳ ಶೈಲದಮೇಲೆ
ಯಾರ ಕಣ್ಣೆರಳು ಅದು ಗಡಿಯಮೇಲೆ ?
ಮೋಸದಲಿ ಮುನ್ನುಗ್ಗಿ ಬಂದಿಹರದೋ ವೈರಿ
ತೋರಿರೈ ಭಾರತದ ವೀರಲೀಲೆ

ಏಳು ಮಕ್ಕಳೆ ಏಳಿ ತುಂಬ ದಕ್ಷತೆ ತಾಳಿ
ರಕ್ಷಣೆಯ ಹೊಣೆಯಿಹುದು ಭುಜದಮೇಲೆ
ನೀವು ಎಚ್ಚರವಿರಲು ವೈರಿ ಓಡುವನಾಚೆ
ಭಾರತಿಗೆ ಗೆಲವಹುದು ಕಲಿತನದೊಳೆ

**ಭಾರತದ ವೀರ ಸೈನಿಕರು:—**

ಬಂದೆವಿದೋ ಬಂದೆವಿದೋ ತಾಯೆ ನಿನ್ನ ಕರೆಗೆ
ನಮ್ಮ ಧಮನಿಯಲ್ಲಿ ರಕುತ ಧುಮುಕುತಿರುವವರೆಗೆ
ಯಾವ ಚಿಂತೆ ವೀರಮಾತೆ ನಿನ್ನ ಗೌರವಕ್ಕೆ
ಕಾದಿ ವಿಜಯ ಮಾಲೆ ಹಿಡಿದು ಬಹೆವು ನಿನ್ನ ಅಡಿಗೆ

ನಮ್ಮ ಪ್ರಾಣ ನಮ್ಮ ತ್ರಾಣ ಅರ್ಪಣ ತವಪದಕೆ
ಎದೆಯ ನೆಚ್ಚು ಭುಜದ ಕೆಚ್ಚು ದರ್ಪಣ ತವಜಯಕೆ
ಬಂದೆವಿದೋ ಬಂದೆವಿದೋ ತಾಯೆ ನಿನ್ನ ಕರೆಗೆ
ಕಾದಿ ವಿಜಯ ಮಾಲೆ ಹಿಡಿದು ಬಹೆವು ನಿನ್ನಅಡಿಗೆ

**ವೀರನಾರಿಯರು: —**

ಇದೋ ವಸ್ತು ಇದೋ ಒಡವೆ ನಿನ್ನ ಜಯಕೆ ಮೀಸಲು
ಕೊಳ್ಳು ತಾಯೆ ನಮ್ಮ ಕಾಣ್ಕೆ ಹುಮ್ಮಸವನು ತಣಿಸಲು

ಆರತಿಯನು ಬೆಳಗಿ ತಿಲಕವಿಟ್ಟು ವಿಜಯ ವೀರಗೆ
ಸ್ಫೂರ್ತಿಯಿಂದ ಭರತನೀತಿ ಇದೋ ತೊಳಗಿ ಬಂದಿದೆ
ಅಂತರಂಗ ಸತ್ವಶೀಲ ಶೃಂಗ ಶಿರವ ಎತ್ತಿದೆ
ಇದೋ ಮಾತೆ ಮಾತೃಭಕ್ತಿ ಶಕ್ತಿಯಾಗಿ ನಿಂತಿದೆ

**ರೈತರು:—**

ರೈತರು ಒಕ್ಕಲು ಮಕ್ಕಳು ನಾವು
ಮಾತೆಯ ಸೇವೆಗೆ ಬಂದಿಹೆವು
ವೈರಿಯ ಮೋಸದ ಮುಗ್ಗಲು ಮುರಿಯಲು
ರಾಶಿಯ ಕಾಣಿಕೆ ತಂದಿಹೆವು.

**ವರ್ತಕರು, ಇನ್ನಿತರು:—**

ಇದೋ ತಾಯೆ, ಇಕೋ ತಾಯೆ
ಅಣುಗರೆಲ್ಲ ಬಂದು
ಶೌರ್ಯದ ನಿಧಿ ಸ್ವರ್ಣದ ನಿಧಿ
ನೆತ್ತರ ನಿಧಿ ತಂದು
ಒಕ್ಕೊರಲಲಿ ಘೋಷಿಪೆವಿದೊ
'ಜೈ ಭಾರತ' ಎಂದು

— ಡಿ. ಎಸ್. ಕರ್ಕಿ

# ಭಾರತೀಯ

ಭಾರತೀಯ ಇವನೆ ಭಾರತೀಯ

೧

ಕಣ್ಣೆತ್ತಿ ದೀಧಿತಿಗೆ
ಬೆಳಗಿಹನು ಭಾರತಿಗೆ
ಸದ್ಭಕ್ತಿ ದೀಪಿಕೆಯ
ಭಾರತೀಯ
ಇವನು ಭಾರತೀಯ

೨

ಸತ್ಯ ಶಾಂತಿ ಪ್ರಿಯಂ
ಸತ್ವ ಕಾಂತಿ ಪ್ರಿಯಂ
ಶುದ್ಧ ಸಂಸ್ಕೃತಿಮಯಂ
ಭಾರತೀಯ
ಪರಮ ಭಾರತೀಯ

೩

ಇವನ ದೃಷ್ಟಿ ವಿಶಾಲ
ನಡೆಯೊಳೀತ ಸುಶೀಲ
ತತ್ವ ಪಥದಲಿ ನಡೆದು
ಪಡೆದ ಗುರಿಯ
ಇವನು ಭಾರತೀಯ

೪

ಇವನೊಳಿರುವದು ಕೆಚ್ಚು
ಅಚಲವಾಗಿಹ ನೆಚ್ಚು
ಅದಕೆ ಇವನದೆ ವಿಜಯ
ಇವನಜೇಯ
ಧೀರ ಭಾರತೀಯ

೫

ಸತ್ಯ ಶೌರ್ಯೋದ್ದೀಪ್ತ
ನಾಗಿ ನಿಂತಿಹನೀತ
ರಾಷ್ಟ್ರರಕ್ಷಣ ದಕ್ಷ
ಭಾರತೀಯ
ವೀರ ಭಾರತೀಯ

— ಡಿ. ಎಸ್. ಕರ್ಕಿ

# ರಾಷ್ಟ್ರೋದಯ ರಾಗ

ಜಯ ಭಾರತ ! ನವಭಾರತ ! ಪ್ರಿಯಭಾರತ ವರ್ಷ !
ಗಿರಿಕಾನನ ನದಿ ಸಾಗರ ರೋಮಾಂಚಿತ ಹರ್ಷ !
ಸ್ವಾರಾಜ್ಯದ ವೈರಾಜ್ಯಕೆ ಸುಮ-ಕುಂಕುಮ ಹರ್ಷ. !
ಗಣರಾಜ್ಯದ ಅನುಶಾಸನವಿದು ಲೋಕಾಕರ್ಷ !

ಪಂಚಮಹಾಶೀಲಂಗಳ ದಿಗ್ವಿಜಯಾದರ್ಶ
ಸರ್ವೋದಯ ಪರ್ವೋದಯವಿದು ಪರಮೋತ್ಕರ್ಷ !

ಕಾಲನ ತಾಂಡವತಾಲಕೆ ನೀಡಿದ ಮೃದುಥಾಪು
ನಮ್ಮಯ ರಾಷ್ಟ್ರಪಿತಾಮಹ ಸತ್ಯವ್ರತ ಬಾಪು !
ಅದಕರಳಿತು ಸ್ವಾತಂತ್ರ್ಯದ ಚಿರಮಂಗಲ ಮುಕುಲ
ಭಾರತ ಭಾಗ್ಯದ ಲಕ್ಷ್ಮಿಯ ಷೋಡಶದಲ ಕಮಲ !

ಕಾಶ್ಮಿರ-ಗುಲಾಬಿಯ ಜತೆ ಮುಡಿಯಲ್ಲಿದೆ ಮುಳ್ಳು
ಪಾಕೀಚೀನ ಫಿತೂರಿಯು ಮಡಲಲಿ ಪಿಸ್ತೂಲು
ಆದರು ನೆಮ್ಮದಿನಾಡಿದು ಮಾನೋನ್ನತ ಶೀರ್ಷ !
ಅಣುಬಾಂಬಿಗು ತೃಣವೆಂಬುವ ಜನಪದ ದುರ್ಧರ್ಷ !

ಅಕುತೋಭಯ ಶರಣಾಶ್ರಯ ಮಹಿಮಾಮಯವಿಂದು
ಬಹುಧಾನಕ ಸಹಜೀವನ ಶ್ರೇಯದಿ ಶುಕ್ಲೇಂದು !
ಅಶೋಕ ಸಿಂಹಗಳೂರ್ಜಿತಗರ್ಜಿತ ಸುಸ್ವಾದು
ಮೊಳಗಿದೆ ನಾಲ್ದೆಸೆಯಾಲಿಸಿ "ಸಮವಾಯವೆ ಸಾಧು"

— ಗೌರೀಶ ಕಾಯ್ಕಿಣಿ

---

ಸಾರನಾಥದ ಅಶೋಕ ಸಿಂಹಸ್ತಂಭದಲ್ಲಿ ಕೆತ್ತಿದ ಲೇಖದಲ್ಲಿ ಬಂದ ವಾಕ್ಯ "ಸಮವಾಯ ಏವ ಸಾಧು."

# ರಣಚಂಡಿಗೆ ಉತ್ತರ

ಹೆಗಲು ಹೆಗಲು ಹೆಜ್ಜೆ ಹೆಜ್ಜೆ
ಜೋಡಿಗೂಡಿ ಸಾಗುವಾ
ಯುಗದ ಹಣೆಯ ಬರಹವಳಿಸಿ
ಜಗಕೆ ಬೆರಗನೆಸಗುವಾ !
ಭಯದ ಗೀತ ಲಯದ ಗೀತ
ಜಯದ ಗೀತ ಹಾಡುವಾ

ನಯ ವಿನಯಕೆ ಸಮಯವೆಲ್ಲಿ ?
ಹರಯ–ಹಿರಿಯರೆಲ್ಲ ನಿಲ್ಲಿ
ಹೆಣ್ಣು ಗಂಡು ಸಮರು ಇಲ್ಲಿ
ರಾಷ್ಟ್ರದ ಋಣ ಸಲಿಸುವಲ್ಲಿ
ಸಮರದಿ ಹೋರಾಡುವಾ

ವೈರಿ ಹೊಕ್ಕನೆಮ್ಮಯ ಗಡಿ
ಹಿಮಾಲಯಕೆ ಹೊತ್ತಿದೆ ಕಿಡಿ
ಶಿವಾಲಯದಿ ಕೆಂಪು ಕರಡಿ
ಬನ್ನಿ ಭಟರೆ ಇಡಿ ಮುಂದಡಿ
ಹೊಡೆದೋಡಿಸೆ ಸಂಕಟಽ

ಮುರಿಯಲಿಽ ಉರಿಯಲಿಽ
ಹಗೆಯ ಹಟ ಮನೆ–ಮಠಽ
ಹಾಳ್ ಹಾಳ್ ಸುರಿಯಲಿಽ
ಹಗೆಯ ಬೀಡಕ್ಕಟ
ಇರಿಯಲಿಽ ಬಿರಿಯಲಿಽ
ಜಯ ಘೋಷವು ದಿಕ್ತಟ !

ವಿಂಧ್ಯಾದ್ರಿ ಸಹ್ಯಾದ್ರಿ
ಹಿಮಾದ್ರಿಗಿಂದು ಬೆಂಬಲ
ವಂಧ್ಯಳಲ್ಲ ಭಾರತಾಂಬೆ
ಗೆಲುವೆ ನಮ್ಮ ಹಂಬಲ

ನಾವು ಹಟದಿ ಅಕಳಂಕರು
ನಾವಧಟರು ಛಲದಂಕರು
ನಾವಿಹೆವ್ವೈ ಶಿವಲೆಂಕರು,
ನೋಡಿ, ಕಾಂಗೊ-ಕೋರಿಯಾ !

ಮಾನವತೆಯ ಕಾಪಾಡಲು
ದಾನವರೊಡ ಕಾದಾಡಲು
ನಮ್ಮ ಖಡ್ಗ ನಮ್ಮ ಢಾಲು
ಸನ್ನದ್ಧ ಅಲ್ಲು ಇಲ್ಲು
ಹೊಡಿಯಿರಿ ಜಯಭೇರಿಯಾ !

ದೇವತಾತ್ಮನನ್ನೆ ಸುಡುವ
ಹೀನ ಚೀನ ದಾನವ
ಪೂರ್ವಾಪರ ಕಡಲು ನುಗ್ಗಿ
ಆರಿಸಲೀ ವಿಪ್ಲವ
ಮಾನವನ್ನೆ ದಂಡತೆತ್ತು
ಬಾಳಬಹುದೆ ಮಾನವ ?
ತಡೆವುದೇಕೆ ? ತಡವಿದೇಕೆ ?
ನೀಡಿರಿ ಬಲಿದಾನವ !

ಉತ್ತರದೀ ರಣಚಂಡಿಗೆ
ನಮ್ಮದೇನು ಉತ್ತರ ?

ಉತ್ತರನ ಕುಲವಿದಲ್ಲ
　　　　ಅಭಯ ಉತ್ತರೋತ್ತರ !

ನಗದಿರದೇ ನಮಗೆ ಲೋಕ ?
　　　　ದ್ರೋಹಿಯ ಹೊರಗಟ್ಟುವಾ

ಹಗೆಯಮೆಟ್ಟಿ ಹೆಣವನೊಟ್ಟಿ
　　　　ವಿಜಯ ದುರ್ಗ ಕಟ್ಟುವಾ !

ಕುಲುಕಿದ ಕೈ ಬೆನ್ನಿಗಿರಿಯೆ
ಅದನು ಕಡಿಯೆ ಕತ್ತಿ ಹಿರಿಯೆ
ಅಳುಕುವವನೆ ಹಿರಿಹಗೆ !
ಉಗುಳಿರವನ ಮೋರೆಗೆ !
ನಾಡನವಸಮಾಜ ರಚನೆ—
　　　　ಜತೆಗೆ ಆತ್ಮ ರಕ್ಷಣೆ

ಉಭಯ ಹೊಣೆಯನೆತ್ತಿ ಭಾರಿ
ಮಗನ ಮದುವೆ, ಬಕನ ಬಾರಿ
ಬಾಗಿಲಿಗಿಹ ದ್ರೋಹಿ ವೈರಿ
ಒಂದೇ ಗುರಿ ಒಂದೆ ದಾರಿ
　　　　ಅಭಯಗೊಳಿಸಿ ಜನವನೆ

ಇಂದು ಸಾಯಲಾರದವನು
ಎಂದು ಬಾಳಲರಿಯನು
ಹೇಡಿಯಾತ ಕೇಡಿಯಾತ
ಮೀರುವ ಕುರಿ ನರಿಯನು !
ದೇಶದ ಮೊರೆ, ಧರ್ಮದ ಕರೆ
ಕರ್ತವ್ಯದ ಕಡುತ್ವರೆ
ರಣಕಾಳಿಯು ಮೊಳಗಿಸುತಿರೆ
　　　　ಜೀವಗಳ್ಳರುಳಿವರೆ ?

ನಾವು ಅಮೃತ ಪುತ್ರರು !
ನರ–ನಿಮಿತ್ತಮಾತ್ರರು !
ಗೋತ್ರಭಿದನ ಗೋತ್ರರು !
ಮೃತ್ಯುಂಜಯ ಮಿತ್ರರು !
ಕ್ಷಯವಿಲ್ಲದ ಕ್ಷಾತ್ರರು !
ಅಲ್ಲ ಗಲಿತಗಾತ್ರರು !

ಚಾಮುಂಡಿಯ ಔತಣಕ್ಕೆ
ನಮ್ಮ ರಕ್ತ ತರ್ಪಣ
ರಾಷ್ಟ್ರದ ಏಕಾತ್ಮ ಶಕ್ತಿ–
ಗೆಮ್ಮ ಮುಖವೆ ದರ್ಪಣ
ದೇಹ ಗೇಹ ನೇಹ ವೆಲ್ಲ
ಅನ್ನಿರಿ " ಕೃಷ್ಣಾರ್ಪಣ ! "

ಭಾರತ ಲಕ್ಷ್ಮಿಯ ಗಜೇಂದ್ರನನ್ನು ಸೆಳೆವ ನಕ್ರವು
ಮಾನಸ-ಕೈಲಾಸವೇರಿ ಬಂತು, ವಿಧಿಯೆ ವಕ್ರವು
ಅದರ ರಕ್ತ ತಿಲಕವಿಡಲಿ ಧ್ವಜ ಅಶೋಕಚಕ್ರವು !

— ಗೌರೀಶ ಕಾಯ್ಕಿಣಿ, ಗೋಕರ್ಣ

# ಕೊಡು ಖಡ್ಗವ ಕೈಗೆ

( ಭಾರತದ ಬಾಲಕ ಬಾಲಕಿಯರ ಭಾವನಾಲಹರಿ )

ಕೊಡು ಖಡ್ಗವ ಕೈಗೆ
ಕೊಡು ಖಡ್ಗವ ಕೈಗೆ— ತಾಯೆ
ಕೊಡು ಕೋವಿಯ ಕೈಗೆ !
ತೋರಿಸುವೆನು ನನ್ನಯ ಕೈ
ಆ ಚೌ-ಎನ್-ಲೈಗೆ—
ಕೊಡು ಖಡ್ಗವ ಕೈಗೆ- ತಾಯೆ
ಕೊಡು ಕೋವಿಯ ಕೈಗೆ ! ||

ಅಭಿಮನ್ಯುವು ಈಗಿಲ್ಲವೆ
ಈಗಿಲ್ಲವೆ ಭರತ ?
ಇಂದಿಲ್ಲವೇ ಲವಕುಶರು ?
ನಾನಿರುವೆನು ಮಾತಾ !
ಕೊಡು ಅಪ್ಪಣೆ ಗಡಿಯುದ್ಧಕೆ
ಜಯ ತರುವೆನು ತಾಯ್ಗೆ—
ಕೊಡು ಖಡ್ಗವ ಕೈಗೆ—ತಾಯೆ
ಕೊಡು ಕೋವಿಯ ಕೈಗೆ ! ||

ಹಿಮಗಿರಿಯಲಿ ಹೂಣರ ಪಡೆ—
ಇದ ಸೈರಿಸಲಾರೆ !
ಚೀಣೀಯರ ಸೊಕ್ಕಿಳಿಸದೆ
ನಾ ನಿದ್ರಿಸಲಾರೆ !
ನಾ ಕಲಿಸುವೆ ಪಾಠವನು
ಆ ಹಳದಿಯ ನಾಯ್ಗೆ !
ಕೊಡು ಖಡ್ಗವ ಕೈಗೆ— ತಾಯೆ
ಕೊಡು ಕೋವಿಯ ಕೈಗೆ ! ||

ಮೆಕ್‌ಮಹೋನ್ ಗಡಿ ನನ್ನದು
ನನ್ನದು ಹಿಮಗಿರಿಯು !
ಈ ಗಿರಿಯನು ನುಂಗುವುದೆ
ಈ ಚೀಣದ ನರಿಯು ?

ಇದೊ ಹೊರಟೆನು ಸಿಡಿಲಾಗಿ
ಪೀಕಿಂಗಿನ ಬಾಯ್ಗೆ !
ಕೊಡು ಖಡ್ಗವ ಕೈಗೆ– ತಾಯೆ
ಕೊಡು ಕೋವಿಯ ಕೈಗೆ ! ||

ಹಾಲುಣಿಸಿದ ಕೈ ಕಚ್ಚಿದ
ಈ ಹಳದಿಯ ಹಾವ
ಸೀಳುವೆನು ಹೂಳುವೆನು
ತಡೆಯುವನಿದನಾವ ?

ಗರುಡನ ಮರಿ ಹೆದರುವುದೆ
ಇಲಿ ತಿನ್ನುವ ಹಾವ್ಗೆ ?
ಕೊಡು ಖಡ್ಗವ ಕೈಗೆ– ತಾಯೆ
ಕೊಡು ಕೋವಿಯ ಕೈಗೆ ! ||

ನೀನುಣಿಸಿದ ಹಾಲಿನ ಋಣ
ತೀರಿಸುವೆನು ತಾಯೆ !
ಹಾರಿಸುವೆನು ಗೆಲುವಿನ ಗುಡಿ
ಗಡಿಯಾಚೆಗೆ ತಾಯೆ !
ಹಗೆಯಳಿಯದೆ ಮಗ ಮರಳನು
ಮಿಂಚಿಳಿದಿದೆ ಮೈಗೆ
ಕೊಡು ಖಡ್ಗವ ಕೈಗೆ !

— ಕಾವ್ಯಾನಂದ

# ಯುದ್ಧ್ಯಸ್ವ

ಯುದ್ಧ್ಯಸ್ವ, ಯುದ್ಧ್ಯಸ್ವ
ಬಾ ಅರ್ಪಿಸು ಸರ್ವಸ್ವ
ಯುದ್ಧ್ಯಸ್ವ, ಯುದ್ಧ್ಯಸ್ವ
ಬೆರಗಾಗಲಿ ವಿಶ್ವ ! || ಪ ||

ಹೆಬ್ಬಾವಿನ ಹಲ್ಲನು ಮುರಿ
ಹಾಲೆರೆದುದು ಸಾಕು
ಹಗೆ ಹಾವು, ನೀ ಗರುಡನು—
ಹರಿ ಹೆಡೆಯನು ನೂಕು !

ಹಿಮದಲ್ಲಿಯೆ ಹುಗಿ ಹಗೆಯನು—
ಹಳದಿಯ ರಕ್ಕಸನ
ಈ ಘಾತುಕ ಈ ವಂಚಕ
ವೃಶ್ಚಿಕ ಭಕ್ಷಕನ !

ಕಡಿ ಖಂಡಿಸು ಇರಿ ದಂಡಿಸು
ಈ ಹೂಣರ, ವೀರ
ನೆಲ ನೆಕ್ಕಿಸು ಅಸು ಕಕ್ಕಿಸು
ತುಳಿ ನೆತ್ತಿಯ ಧೀರ !

ಯುದ್ಧ್ಯಸ್ವ ಯುದ್ಧ್ಯಸ್ವ
ಬಾ ಅರ್ಪಿಸು ಸರ್ವಸ್ವ
ಯುದ್ಧ್ಯಸ್ವ ಯುದ್ಧ್ಯಸ್ವ
ಬೆರಗಾಗಿದೆ ವಿಶ್ವ !

ಜನಮನವಿದೊ ಜ್ವಾಲಾಮುಖಿ
ದಾವಾನಲವಿಂದು

ಈ ಅಗ್ನಿ-ಸ್ಫೋಟದಲಿ
ಹಗೆ ಹೋಗಲಿ ಬೆಂದು !

ಈ ಹೂಣರ ಹೆಣ ತೇಲಲಿ
ನೆತ್ತರ ನದಿಗಳಲಿ !
ಜಯಭೇರಿಯು ಭೋರ್ಗರೆಯಲಿ
ನಮ್ಮಯ ಗಡಿಗಳಲಿ !

ಪಣತೊಟ್ಟೆವು ನಾವೆಲ್ಲರು
ರಣಗೆಲ್ಲುವೆವೆಂದು
ರಣಗೆದ್ದೇ ವಿಶ್ರಮಿಪೆವು
ಉನ್ಮತ್ತರ ಕೊಂದು !

ಈ ಉಕ್ಕಿನ ನಿರ್ಧಾರವು
ಒಕ್ಕೊರಲಲಿ ಉಕ್ಕಿ
ಸೊಕ್ಕಡಗಲಿ ಚೀಣೀಯರ
ಹೋಗಲಿ ಹುಡಿಮುಕ್ಕಿ !

ಇದೆ ಗರ್ಜನೆ ಇದೆ ಘೋಷಣೆ
ಇದೆ ನಮ್ಮಯ ಸ್ವರವು
ಇದೆ ಧ್ಯೇಯವು ಇದೆ ಧರ್ಮವು
ಇದು ರಾಷ್ಟ್ರದ ಕರೆಯು—

ಧಗಧಗಿಸುವ ಕಿಚ್ಚಾಗಲಿ
ಕನ್ನಡಿಗರ ಕೆಚ್ಚು
ಕನ್ನಡತಿಯರೆದೆ ಮಿಡಿಯಲಿ
ಓಬವ್ವನ ರೊಚ್ಚು

ತೊಡು ಖಾಕಿಯ ಹಿಡಿ ಕೋವಿಯ
ನಡೆ ಯುದ್ಧಕೆ ಯುವಕ

ನರ ನರದಲಿ ಹರಿದಾಡಲಿ
ಹಗೆ ಗೆಲ್ಲುವ ತವಕ !

ಬಲಿದಾನವ ಬೇಡುತಿದೆ
ಭರತಾವನಿಯಿಂದು
ಕೊಡು ಬಲಿಯನು ಪಡೆ ಗೆಲುವನು
ಶತ್ರುಗಳನು ಕೊಂದು !

ಸ್ವಾತಂತ್ರ್ಯದ ಸಂರಕ್ಷಣೆ
ಸರ್ವರ ಹೊಣೆಯಿಂದು
ಈ ರಾಷ್ಟ್ರದ ರಕ್ಷಣೆಗೆ
ಕೊಡು ರಕ್ತದ ಬಿಂದು !

ದುಡಿ ಗಳಿಸು ಪಡೆ ಉಳಿಸು
ಶಸ್ತ್ರಾಸ್ತ್ರಕೆ ಸಲಿಸು
ತನುಮನಧನ ಭರತಾರ್ಪಣೆ
ಭಾರತವನು ಬಲಿಸು !

ಇದೊ ರಕ್ತದ ಕಾಣಿಕೆಯಿದೊ
ಶ್ರಮಸ್ವೇದದ ಮುಡಿಪು
ನಾವೆಲ್ಲರು ಸೈನಿಕರೇ
ಇರಲಾವುದೆ ಉಡುಪು !

ಊರೂರೂ ಕಿತ್ತೂರು
ಮನೆ ಮನೆಯೂ ದುರ್ಗ
ಪ್ರತಿಪೌರನ ಎದೆಯಲ್ಲಿದೆ
ಸ್ವಾತಂತ್ರ್ಯದ ಸ್ವರ್ಗ !

ಗಣಿ ಗಿರಣಿಯು ರಣರಣಿಸಲಿ
ರಣ ಸಿದ್ಧತೆಯಿಂದ

ಉತ್ಪತ್ತಿಯು ಉಕ್ಕೇರಲಿ
    ಹೊಲಗದ್ದೆಗಳಿಂದ !

ಯುದ್ಧ್ಯಸ್ವ ಯುದ್ಧ್ಯಸ್ವ
    ಬಾ ಅರ್ಪಿಸು ಸರ್ವಸ್ವ
ಯುದ್ಧ್ಯಸ್ವ ಯುದ್ಧ್ಯಸ್ವ
    ಬೆರಗಾಗಲಿ ವಿಶ್ವ !

— ಕಾವ್ಯಾನಂದ

# ದಿವ್ಯ ಶಕ್ತಿ

ನಾಗರಿಕತೆಯ ಧಮನಿಯಲಿ
ಸುಪ್ತ ಜ್ವಾಲಾಮುಖಿಯಂತಿದ್ದ
ರಕ್ತಪಿಪಾಸೆ ಉಲ್ಬಣಿಸೆ—
ಮನುಕುಲದೆದೆ ಸೀಳಿ
ರಕ್ತದೋಕಳಿಯಾಡಿ
ಮೆರೆಯಲಿಚ್ಛಿಸಿತಿಂದು ಹೀನ ಶಕ್ತಿ.

ಇತಿಹಾಸ ತಿರುಗಣಿಯು
ಸುತ್ತಿ ಬಂದಂತೆ
ಮತ್ತೆ ಬೆಳೆಯುತಿದೆ ಆಸುರೀ ಶಕ್ತಿ
ಅರಿವಿನೆಡೆಯಲ್ಲಿ ಅಣ್ವಸ್ತ್ರವಡಗಿರಲು
ಕಣ್ಣು ಮಿಟಕಿಸುವಲ್ಲಿ
ಪ್ರಳಯ, ಪ್ರಗತಿಗೆ ಮುಕ್ತಿ

ಆದರೇನಂತೆ—
ಸತ್ಯದೆದೆ ರಕ್ತ ಹೆಪ್ಪುಗಟ್ಟುವದಲ್ಲ
ಎಷ್ಟೆ ಹಿಮರಾಶಿ ಧುಮ್ಮಿಕ್ಕಿ ಬರಲಿ
ಹಿಂಸೆ ಬೀಜಾಸುರನ ರಕ್ತ ಕಣ ಕಣದಿ,
ಮತ್ತೆ ಮೂಡುವದಲ್ಲಿ ದಿವ್ಯ ಶಕ್ತಿ

—ಶ್ರೀನಿವಾಸ ಕುಲಕರ್ಣಿ

# ಎತ್ತು ಆರತಿ, ಓ ಭಾರತಿ !

೧

ಅವನಿಗೆತ್ತು ಆರತಿ,
ಓ ದೇವಿ ಭಾರತಿ :
ನಿನ್ನ ವೀರ ರಣಮತಿ,
ಹೆಸರೊಲ್ಲದ ದಳಪತಿ !
ಎತ್ತಾರತಿ, ಓ ಭಾರತಿ,
ಅವನಿಗಲ್ತೆ ಸ್ವರ್ಗತಿ !

೨

" ಮುಂದೆ ಹೆಣ ! ಹಿಂದೆ ಹೆಣ !
ಅತ್ತ ಇತ್ತ ಸುತ್ತ ಮುತ್ತ
ಎತ್ತ ನೋಡಲತ್ತ ಹೆಣ !
ನಡುವೆ ನನ್ನ ಮೆಷೀನ್ ಗನ್ನ
ನಿರಂತರದ ಮಾರಣ !
ಡಮ ಡಮಡಮ ! ಅಮಮ ! ಅಮಮ !
ಅನುರಣಿಸಿತೊ ಹಿಮಾಲಯ !
ಕೆದರಿತೊ ಹಿಮ, ಬೆಗರಿತೊ ಹಿಮ,
ನಡುಗಿತ್ತೆನೆ ಭೂಮಿಲಯ !
ಡಮ ಡಮ ಡಮ ! ಡಮ ಡಮ ಡಮ !
ಅಟ್ಟಹಾಸಂಗೆಯ್ಯೆ ಯಮ
ಅಮಮ ನನ್ನ ಮೆಷೀನ್ ಗನ್ನ
ಸಿಡಿಗುಂಡಿನ ದಾರುಣ
ಜೆಟ್ಟಿತಾಯ್ತೊ ಗಿರಿರಣ !

೩

ಹಿಂಡು ಹಿಂಡು ಹಿಂಡು ಹಿಂಡು
ತೆರೆ ತೆರೆ ತೆರೆ ಮೇಲೆ ಮೇಲೆ
ಹಾಯ್ತು ಬಂತೊ ಚೀಣಿ ದಂಡು
ಕಾಲಾಂತಕ ನಾಯ್ಗಳೋಲೆ!
ಹಿಮಾಚಲದ ಬಂಡೆಗುಂಡು
ಉರುಳಿ ಉರುಳಿ ಹೊರಳಿ ಹೊರಳಿ
ಕೆರಳಿ ಬರುವ ತೆರದಲಿ
ಅಸಂಖ್ಯ ಭರದಲಿ
ಹಿಂಡು ಹಿಂಡು ಹಿಂಡು ಹಿಂಡು
ನುಗ್ಗಿ ಬಂತೊ ಚೀಣಿ ದಂಡು!
ಆದರೇನು? ನನ್ನ ಕೋವಿ,
ರುದ್ರಕಾಳಿ, ಮಹಾದೇವಿ,
ಯಂತ್ರರೂಪಿಯಾಗಿ ಓವಿ
ಓಕರಿಸಿತು ಸಿಡಿಮದ್ದಿನ
ಪ್ರಲಯ ವರ್ಷವನ್ನೆ ಕಾರಿ,
ಸತ್ಯ ಗೆಲುವುದೆಂದು ಸಾರಿ,
ಗಣಭಾರತ ರಣಭೇರಿ!
ಸದ್ಧರ್ಮದ ಜಯಭೇರಿ!

೪

ಬಲಕೆ ಬಿತ್ತು ಒಂದು ಗುಂಡು;
ಕಲ್ಲು ಮಣ್ಣು ಸಿಡಿಯಿತು.
ಎಡಕೆ ಬಿತ್ತಿನ್ನೊಂದು ಗುಂಡು;
ಕುಳಿರ್ವೆಕಿಲ್ ಒಡೆಯಿತು.
ಗಿರಿಗಹ್ವರ ಗುಹಾಕಂಠ
ಶತ ಶತ ಶತ ದಿಶಾಕಂಠ

‘ ಹೋ ’ ಒಕ್ಕೊರಲೊದರಿತು !
ಹಾ ವ್ಯತ್ಯ್ಯವೆ ಬೆದರಿತು !
ಮೇಲೆ ಹೋಯ್ತು ಒಂದು ಗುಂಡು,
ಇದಿರೆ ಬಿತ್ತಿನ್ನೊಂದು ಗುಂಡು;
ನೆತ್ತಿ ಕೀಸಿತೊಂದು ಗುಂಡು !
ಪಕ್ಕದವನ ಕಾಲೆ ತುಂಡು :
ಚಿಮ್ಮಿಬಿದ್ದುದೆನ್ನಬಳಿ !
ಆದರವನದೆಂಥ ಕಲಿ ?
ಕೂಗಲಿಲ್ಲ, ಚೀರಲಿಲ್ಲ,
ನೋವಿಗಿನಿತು ನರಳಲಿಲ್ಲ.
ಸಾವಮುನ್ನ ಮೆಷೀನ್ ಗನ್ನ
ತುಂಬುವುದನು ತೊರೆಯಲಿಲ್ಲ....
ಓ ದೇವಿ ಭಾರತಿ,
ಅವನಿಗೆತ್ತು ಆರತಿ !

೫

ಡಮ ಡಮ ಡಮ ! ಡಮ ಡಮ ಡಮ !
ಹಿಮ ಬಂಧುರ ಗಿರಿಕಂದರ
ಅಟ್ಟಹಾಸ ಮೊರೆಯಿತು;
ಕುದಿವ ನನ್ನ ಮೆಷೀನ್ ಗನ್ನ
ಲೌಹ ವರ್ಷ ಕರೆಯಿತು.
ಕೆಂಪು ಚೀಣದೊಡಲ ಕೋಡಿ
ಒಡೆದು ಹೆಪ್ಪುಗಟ್ಟಿತು;
ಹಳದಿ ಜನರ ಹೆಣದ ಬಣಬೆ
ಸುತ್ತ ಕೋಂಟೆ ಬಿದ್ದಿತು !
ಬಲಕೆ ಗುಂಡು ! ಎಡಕೆ ಗುಂಡು !
ಮೇಲೆ ಗುಂಡು ! ಕೆಳಗೆ ಗುಂಡು !

ಕಾಲಿಗೊಂದು ! ತೋಳಿಗೊಂದು !....
ಹೊಟ್ಟೆಗೊಂದು !.... ಬಿದ್ದೆನು !
ಸುಡುವ ನನ್ನ ಮೆಷೀನ್ ಗನ್ನ
ಆತು ಮತ್ತೆ ಎದ್ದೆನು !
ಎಡಕೆ ಬಲಕೆ ಮೇಲೆ ಕೆಳಗೆ
ಗುಂಡು ಗುಂಡು ಗುಂಡು ಗುಂಡು....
ಹಾ....
ತಾಯ ಸೇವೆಗೂನ ಬಂತೆ ?
ಎದೆಗೆ ಬಿತ್ತೆ ಒಂದು ಗುಂಡು ?
ಎದ್ದೆ ! ಏಳವಾದೆ ! ಮತ್ತೆ
ತತ್ತರಿಸುತ ಬಿದ್ದೆನು !....
ಧಾವಿಸಿತ್ತು ಬಳಿಗೆ, ಕಂಡು,
ಚೀಣೀಯರ ಹಂದಿ ಹಿಂಡು !
ಸುತ್ತಲಿರದೆ ಸಿಡಿಯುತಿತ್ತು
ವೈರಿದಳದ ಮದ್ದುಗುಂಡು !
ಜೊತೆಯಿದ್ದವರೋಡಿ ಬಂದು
ಎತ್ತಿ ರಕ್ಷೆಗೊಯ್ಯಲೆಂದು
ತುಡುಕಿ ಹಿಡಿದರೆನ್ನನು !
ರಕ್ತ.... ಕೋಡಿ ಹರಿಯುತಿತ್ತು;
ಒಡಲೊ ? ಛಿದ್ರಛಿದ್ರವೋಗಿ
ಕುಸಿಯುತಿತ್ತು....
ಗದರಿದೆ !
' ವೀರರಿರಾ ! ಮಿತ್ರರಿರಾ !
ತಾಯ್ಗೆ ಬೇಕು ನಿಮ್ಮ ಸೇವೆ;
ಎಂತಿದ್ದರು ನಾನು ಸಾವೆ !....
ನನ್ನನುಳಿಸಲೆಳಸಿ ನೀವೆ
ವ್ಯರ್ಥ ಸತ್ತರದೂ ದ್ರೋಹ !

ಸಾಕು ಬಿಡೀ ನಿಮ್ಮ ಮೋಹ !
ಕೊಳೆಯಲಿಲ್ಲೆ ನನ್ನ ದೇಹ !....
ನಿಮಗೆ ಇದೋ ನನ್ನ ಆಜ್ಞೆ;
ಹಿಂದೆ ಸರಿದು ನಡೆಯಿರೊಡನೆ;
ಮೂಲದಳವ ಕೂಡಿಕೊಳ್ಳಿ;
ನನ್ನನಿಲ್ಲೆ ತ್ಯಜಿಸಿರಿ !
ತಾಯ್ಗೆ ಬೇಕು ನಿಮ್ಮ ಸೇವೆ;
ಬದುಕಿ ರಿಪುವ ವಧಿಸಿರಿ !.... '

೬

ಡವು ಡವು ಡವು ! ಡವು ಡವು ಡವು !
ಸಿಡಿಲಕಲ್ಲ ಮಳೆಯವೊಲೆ
ಬಡಿದುದೆನಗೆ ಗುಂಡುಮಳೆ;
ಬಂಡೆ ಬಂಡೆ ಬಂಡೆ ಬಂಡೆ
ಉರುಳಿ ಹಾಯ್ವ ಹಗೆಯ ಕಂಡೆ....
ಯಾರೊ ಕೂಗಿದಂತೆ ಆಯ್ತು
ಮರಣ ಮಬ್ಬು ಕವಿಯುತಿದ್ದ
ನನ್ನ ಪ್ರಜ್ಞೆಗೆ....
ಸರಿದಿದ್ದರು ನಮ್ಮರೆಲ್ಲ
ನನ್ನ ಆಜ್ಞೆಗೆ....
ಮತ್ತೆ....
ದೂರ ಯಾರೊ ಕೂಗಿದಂತೆ....
ಸತಿಯು ಚಿಂತೆ, ಸುತರ ಚಿಂತೆ,
ಸುಳಿದು ಹೋಯ್ತು ಊರ ಚಿಂತೆ....
ಜಗಜ್ಜನನಿ, ಭರತಮಾತೆ,
ರಕ್ಷೆಗಿರಲು ಏಕೆ ವ್ಯಥೆ ?
ಮರೆವು ಮುಸುಗುತಿತ್ತು ನನ್ನ....

ಯಾರೊ? ಯಾಕೊ? ಮೆಷೀನ್ ಗನ್ನ....
ಬಳಿಯೆ ಯಾರೊ ಕೂಗಿದಂತೆ....
‘ಹಿಂದಿ ಚೀಣಿ ಭಾಯ್ ಭಾಯ್!
ಹಿಂದಿ ಚೀಣಿ ಭಾಯ್ ಭಾಯ್!’
ಹಾಯ್! ಹಾಯ್! ಹಾಯ್!”

— ಕುವೆಂಪು

# ಪಾಂಚಜನ್ಯ

ನಡೆ ಮುಂದೆ, ನಡೆ ಮುಂದೆ,
   ನುಗ್ಗಿ ನಡೆ, ಮುಂದೆ !
ಜಗ್ಗದೆಯೆ, ಕುಗ್ಗದೆಯೆ,
   ಹಿಗ್ಗಿ ನಡೆ ಮುಂದೆ !

ಬೆಚ್ಚಬಿಡು, ನೆಚ್ಚನೆಡು
ಕೆಚ್ಚೆದೆಯ ಗುಡಿಯಲ್ಲಿ ;
ಸೆರೆಯ ಹರಿ, ಅರಿಯನಿರಿ,
ಹುಟ್ಟಳಿಸು ಹುಡಿಯಲ್ಲಿ !
ನಾನಳಿವೆ, ನೀನಳಿವೆ,
ನಮ್ಮೆಲುಬುಗಳ ಮೇಲೆ
ಮೂಡುವುದು, ಮೂಡುವುದು
ನವಭಾರತದ ಲೀಲೆ !
ನೊಂದ ದನಿ, ಕಣ್ಣಪನಿ
ಬರಿದೆ ಎಂದೊರೆಯದಿರು !
ತೆತ್ತ ಹಣ, ಸತ್ತ ಹೆಣ
ಹೋಯ್ತೆಂದು ಮೊರೆಯದಿರು !
ಪೊಡವಿಯೊಳಗಡಗಿರುವ
ತಳಹದಿಯ ತೆಗಳುವರೆ ?
ಮೆರೆಯುತಿರುವರಮನೆಯ
ಸಿರಿಯೊಂದ ಹೊಗಳುವರೆ ?
ಎಲ್ಲ ಇದೆ, ಎಲ್ಲ ಇದೆ
ನಿತ್ಯತೆಯ ಗಬ್ಬದಲಿ ;

ಮುಂದೆಯದು ತೋರುವುದು
ಬಿಡುಗಡೆಯ ಹಬ್ಬದಲಿ !
ನೆಚ್ಚುಗೆಡಬೇಡ ನಡೆ,
ಕೆಚ್ಚಿದೆಯ ಕಲಿಯೆ !
ಬೆಚ್ಚಿದರೆ, ಬೆದರಿದರೆ,
ಕಾಳಿಗದು ಬಲಿಯೆ ?

ಭರತಖಂಡದ ಹಿತವೆ
ನನ್ನ ಹಿತ ಎಂದು,
ಭರತಮಾತೆಯ ಮತವೆ
ನನ್ನ ಮತ ಎಂದು,
ಭಾರತಾಂಬೆಯ ಸುತರೆ
ಸೋದರರು ಎಂದು,
ಭಾರತಾಂಬೆಯ ಮುಕ್ತಿ
ಮುಕ್ತಿ ನನಗೆಂದು,
ನುಗ್ಗು ಮುಂದಕೆ, ಧೀರ,
ಕಾಳಗದ ಕೊಲೆಗೆ !
ನುಗ್ಗು ಮರಣಕೆ, ವೀರ,
ಸಗ್ಗದಾ ನೆಲೆಗೆ !

ನೋಡದೋ, ನೋಡಲ್ಲಿ,
ದರ್ಪರಥದಡಿಯಲ್ಲಿ !
ಹೊರಳುತಿರುವಳು ತಾಯಿ
ನೆತ್ತರಿನ ಪುಡಿಯಲ್ಲಿ !
ಬಾಳಸೆರೆಯಿಂದ ಹಿರಿ !
ನುಗ್ಗು, ನಡೆ, ಕಟ್ಟ ಹರಿ !
ತಡೆಯೆ ಬಂದವರ ಇರಿ !
ಒಲಿಯುವಳು ಜಯದ ಸಿರಿ !

ಜನ್ಮವೊಂದಳಿದರೇಂ ?
   ನೂರಿಹವು ಬಲಿಗೆ !
ಕಾಳೆಗದೊಳಳಿಯಲೇಂ ?
   ಸಾವೆ ಸಿರಿ ಕಲಿಗೆ !

ನಿಂತೇನು ನೋಡುತಿಹೆ ?
   ಹೆದುಗುವರೆ ಇಲ್ಲಿ ?
ಮಸಣವಾಗಲಿ ಎದೆಯು
   ರಣರಂಗದಲ್ಲಿ !
ನೆತ್ತರನು ನೋಡುವೆಯ ?
ಸತ್ತವರ ನೋಡುವೆಯ ?
ಕಂಕಾಲಗಳ ಗೂಡೆ ?
ಮರುಳುಗಳ ನೆಲೆಬೀಡೆ ?
ಕಾಳಿಯುಳುಕುವಳೇನು
   ರಕ್ಕಸರ ಬಲಿಗೆ ?
ಸಮರ ರಂಗದ ನಡುವೆ
   ಬೆದರಿಕೆಯೆ ಕಲಿಗೆ ?
ಹಾ, ನೋವು ! ಹಾ, ನೋವು !
ಎಂದೆಲ್ಲ ಕೂಗುವರೆ ?
ಹಾ ನೀರು ! ಹಾ ನೀರು !
ಎಂದಸುವ ನೀಗುವರೆ ?
ಕೂಗಿಗೆದೆಗರಗದಿರು !
ಬೇನೆಯಿರೆ ಮರುಗದಿರು !
ಕಂಬನಿಯ ಕರೆಯದಿರು,
   ಗುರಿಯ ಮರೆಯದಿರು ;
ಕಲಿಯೆ, ಹಿಂಜರಿಯದಿರು,
   ತಾಯ ತೊರೆಯದಿರು !

ಎಲುಬುಗಳ ತೊಲೆಗಳಲಿ,
ಮಾಂಸದಾ ಮಣ್ಣಿನಲಿ,
ನೆತ್ತರಿನ ನೀರಿನಲಿ,
ಬೇನೆ ಬಿಸುಸುಯ್ಲಿನಲಿ
ಬಿಡುಗಡೆಯ ಸಿರಿಗುಡಿಯ
ಮಸಣದಲಿ ಕಟ್ಟು!
ಪಾವನದ ತಾಯುಡಿಯ
ಬಲ್ಮೆಯಲಿ ಮುಟ್ಟು!

ಆತ್ಮವಚ್ಯುತವೆಂದು,
ಜನ್ಮಗಳು ಬಹವೆಂದು,
ಮೃತ್ಯು ನಶ್ವರವೆಂದು,
ಭಾರತಿಗೆ ಜಯ ಎಂದು,
ನಡೆ ಮುಂದೆ, ನಡೆ ಮುಂದೆ,
ನುಗ್ಗಿ ನಡೆ, ಮುಂದೆ!
ಜಗ್ಗದೆಯೆ, ಕುಗ್ಗದೆಯೆ,
ಹಿಗ್ಗಿ ನಡೆ, ಮುಂದೆ!

— ಕುವೆಂಪು

# ಧುರವೀಳ್ಯ

## ೧

ನಾಲ್ಕು ಕಾಲಿನದೆಲ್ಲ ಆಕಳಿಂದೇ ಬಗೆದು
　　ನಮ್ಮ ಗುಡ್ಡದ ಬದಿಗೆ ಹಾಯುಗೊಟ್ಟೆ,
ಬೆಳೆದ ಸಲುಗೆಯು ಕೊನೆಗೆ ತಲೆಯೇರಿ ಕುಳಿತಿತ್ತು,
　　ಅಂತು ಕೊನೆಗೂ ನೀನು ಕೈಯ ಕೊಟ್ಟೆ.

ನಟಿಯು ಸುದ್ದಿಯು ಹಾಗೆ ನೀ ಬಂದ ಮೊದಲಲ್ಲಿ
　　ತೋರಿದೆನು ಕದ ತೆರೆದು ಎದೆಯ ತೆರೆದು
ಗಿರಣಿ ಬಂಬಿನ ಹೊಗೆಯ ಊಹೆಯ ವಿಲಾಸದಲಿ
　　ನಾ ಕಂಡ ನಾಳೆಗಳ ದರ್ಶನವನು !

ಇದೆ ನೋಡು ಹಿಮಗಿರಿಯು ಇಲ್ಲಿ ಬೆಳೆದವು ವೇದ
　　ಮತ್ತೆ ಭಗವದ್ಗೀತೆ ರಾಮಾಯಣ–
ಇದರ ಬಿಳಿ ನೆರಳಿನಲಿ ನಡೆದು ನಿಂತೂ ಕುಳಿತು
　　ಬುದ್ಧ ಕಂಡನು ಬಿಳಿಯ ಸತ್ಯವನ್ನ

ಈ ಬಿಳಿಯ ಬದುಕನ್ನೆ ಅದಕಿದಕೆ ಬಳಸಿದೆವು
　　ಎಳೆಯ ಮಗು ನಕ್ಕದ್ದೂ ಅದರ ಛಾಯೆ
ಹೆಣ್ಣ ಕೆನ್ನೆಯ ಹೊಳಪು ಕಣ್ಣ ಕೊನೆಯೊಳ ಹರಿತ–
　　ವೆಲ್ಲವೂ ಹಿಮಗಿರಿಯ ಬಿಳಿಯ ಮಾಯೆ !

ಈ ಒಂದೆ ಬಿಳಿಯಲ್ಲಿ ಏಳು ಬಣ್ಣವ ಮಾಡಿ
　　ಯೌವನದ ಕನಸುಗಳ ಬಣ್ಣಿಸುವೆವು.
ಹಸಿರೆಲೆಯ ತುದಿಗಳಲಿ ತೋರಣದ ಹೂ ಚಿಗುರು
　　ಬೆಳದಿಂಗಳಿನ ಬದುಕು ತಾಜಮಹಲು !

ತುಟಿಗೆ ತುಪ್ಪವ ಸವರಿ ಹತ್ತು ಮಾತನ್ನಾಡಿ
ಎಣಿಸಿದೆಯೊ ಮನೆಯ ಗಳ ಮಲಗಿದಲ್ಲೆ
ಹೊಲೆಯ, ಹೊರವಡು ಮೊದಲು ನಿನ್ನುಸಿರನುಳಿಸುವೊಡೆ
ಇಲದಿರಕ ನೀ ಸತ್ತೆ ನಿಂತಲ್ಲಿಯೆ !

೨

It is a tale told by an idiot full of sound and fury signifying nothing.

—*Shakespeare*

ತಿರುಗು, ಬಗರಿಯು ತುಳಿದು ನಿದ್ದೆ ಕೆಡಿಸುವ ಕುಹಕ,
ಹಕ್ಕಿಗಳ ಇಂಚರಕೆ ಗೂಗೆ ದನಿ ಪಲ್ಲವಿಯು,
ಹೊರಟ ರೇಲಿನ ಕಂಬಿಕಿತ್ತು ದಾರಿ ಬಿಡಿಸುವುದು
ನಿನ್ನ ಅಗ್ಗಳಿಕೆ
ಅಪಘಾತ ಕಂಡು ಅಪಹಾಸ್ಯ ಮಾಡುವುದೀಗ
ನಿಮ್ಮಜ್ಜ ನಿನಗಿತ್ತ ಹಿರಿಯಗುಣ.
ಊರ ಪೇಟೆಯ ದರವನೆಲ್ಲ ಕದಲಿಸಿ ಕದಕಿ
ತೆರೆದ ಕಣ್ಣಲಿ ಕಾರ ಉಗ್ಗುವುದು,
ಶಾಂತ ಸಭೆಗಳಲೆಲ್ಲ ಲಬೊ ಲಬೋ ಹೊಯ್ಕೊಂಡು
ಛಟ ಛಟ ಪಟಾಕಿ ಸರ ಹಾರಿಸುವುದು,
ನಿಮಿಷ ನಿಮಿಷಕ್ಕೊಮ್ಮೆ ಲಾಠೀ ಪ್ರಹಾರ
ಅಲ್ಲಿಯೂ ನಿನ್ನದೇ ಕಾರುಭಾರ !
ಗುಂಪು ಇದ್ದಲ್ಲೆಲ್ಲ ಗಲಾಟೆ-ತಂಟೆ,
ಎಲ್ಲವ್ವಾ ನಿನ್ನ ಪಾಲಕ್ಕುಧೋ ಉಧೋ

೩

ನೀ ಬಂದೆ ಭಾರತದ ನೊರೆವಾಲ ಕೊಡವನ್ನು
ನಮ್ಮ ಬಿಳಿ ನಗೆಯನ್ನು ಕದಿವುದಕ್ಕೆ

ನಮ್ಮ ಮನೆಯಾಗಸದ ಬಣ್ಣಗಳ ಗದಬಡಿಸಿ
ಅಸ್ಪಷ್ಟ ಭ್ರಾಂತಿಯನು ಬಿತ್ತಲಿಕ್ಕೆ

ನಮ್ಮ ಹೆಣ್ಣಿನ ಕೆನ್ನೆಯಲ್ಲಿ ಬೆಳೆದಿರುವಂಥ
ಚೆಂಗುಲಾಬಿಗಳನ್ನು ಕೀಳಲಿಕ್ಕೆ
ಬಿಸಿಲ ಬಿಸಿ, ಹಗಲ ನಿಜ, ಹಸಿರು ಹೂ ವೈಭವವ
ನಮ್ಮ ನಂಬಿಕೆಗಳನು ಸುಡುವುದಕ್ಕೆ

ಬರೆದುಕೋ ಎಲೆ ಕೋರಿಹರಕ ನಾನಿದ್ದೇನೆ
ನೀನರಿತು ಮರೆತ ಉದ್ರೇಕ ಸಾವ !
ನಾಗಿರುವತನಕ ಕೆಂಪೂ ಹಸಿರು ಉದಯಾಸ್ತ.
ಎಲ್ಲ ಇದೆ ಈ ಭೂಮಿ ಬಂಜೆಯಲ್ಲ !

ಇಕಾ ಉಸಿರು ಬೆಚ್ಚಗಿದೆ, ಕಾದ ಬಾನ್ ಕೆಂಪಗಿದೆ
ಅರಳಿರುವ ಹೂಗಳಲಿ ಉರಿವ ಬೆಂಕಿ
ಸತ್ತುದನು ಬದುಕಿಸಲು ಹಸಿರು ಅಪರಂಪಾರ
ನೀರ ಹನಿಯಲು ಎಸರು ಬರುವುದುಕ್ಕಿ

ನೀನು ಕದ್ದುದನೆಲ್ಲ ಕಕ್ಕಿಸುವೆ ದಕ್ಕಿದುದು
ಒಂದಕ್ಕೆ ಹತ್ತು ಹನ್ನೆರಡರಷ್ಟು
ನಂಬಿರುವ ನಿನ್ನೆಲ್ಲ ಹೇಸಿ ಮೌಲ್ಯಗಳನ್ನು
ಸುಡುವೆ ಮಾದರಿಗಾಗಿ ಒಟ್ಟೆ ತರಿದು

ನಿನ್ನ ಹೆಂಡಿರ ಗರ್ಭ ಕಳಚಿ ಬೀಳುವ ಹಾಗೆ
ಊದಿದೆನಿದೋ ಕೇಳು ಪಾಂಚಜನ್ಯ !
ನಿನ್ನ ಮೀಸೆಯ ಕಿತ್ತು ಕೈಗೆ ಕೊಟ್ಟಿಲ್ಲದೇ
ನನ್ನ ನೆತ್ತರ ಕುದಿಗೆ ಶಾಂತಿಯಿಲ್ಲ

— ಚಂದ್ರಶೇಖರ ಕಂಬಾರ

# ಭಾರತಜಯಾಶಂಸನಮ್

|| ೧ ||

ಕ್ರುದ್ಧ್ಯತ್ಕೇಸರಿಶಾವಕ್ಕೈಃ ಪ್ರಕಲಯನ್ ಕ್ಕೈಶೋರಕೇಲೀಃ ಪುರಾ
ದೌಷ್ಯಂತಿರ್ಭರತಃ ಸ ಸರ್ವದಮನೋಯನ್ನಾಮಮೂಲಃ ಪುಮಾನ್
ಸರ್ವಾನ್ಗರ್ವಿತ ವೈರಿಣೋಪಿ ದಮಯತ್ಸೌಭ್ರಾತ್ರನಿರ್ವಾಹಕಂ
ನಿರ್ಜಿತ್ಯಾಕ್ರಮಕಾರಿ ಚೀನಮಧುನಾ ಜೀಯಾಚ್ಚಿರಂ ಭಾರತಮ್ ||

|| ೨ ||

ಗೌರೀಶಂಕರಯೋರ್ಗೃಹಂ ಚ ಬದರೀನಾರಾಯಣಸ್ಯ ಸ್ಥಲ
ಮಸ್ಮದ್ದೇವತಯೋಸ್ತು ಯಜ್ಜಲಮಪಿ ಗಂಗಾದಿ ತೀರ್ಥ ಹಿ ನಃ
ತಂ ಚಾಕ್ರಮ್ಯ ಹಿಮಾಲಯಂ ಸ್ವಮುಕುಟಂ ದೇವಾತ್ಮಕಂ ನಸ್ತುದತ್
ನಿರ್ಜಿತ್ಯಾಕ್ರಮಕಾರಿ ಚೀನಮಧುನಾ ಜೀಯಾಚ್ಚಿರಂ ಭಾರತಮ್ ||

|| ೩ ||

ವಕ್ರಾದ್ಯಃಕಿಲ ಪಂಚಶೀಲ ಮಧುಭೃತ್ ಪಂಚಾಕ್ಷರೀಂ ಸಂಜಪನ್
ಹಸ್ತಾತ್ ಕಿಂ ಚ ಸಹೋದರೋದರಭಿದಂ ಯಃ ಪಂಚಶೂಲಂ ವಹೇತ್
ಪಂಚತ್ವಂ ಚ ಮನುಷ್ಯತಾಮಿಹನಯನ್ ಸರ್ವ ಪ್ರಪಂಚೇಽಧಮಂ
ತಂ ಚೋದಂಚಿತ ಚೌರ್ಯ ವಂಚಕ ಗುಣಂ ಚೀನಂ ಜಯೇದ್ಭಾರತಂ ||

|| ೪ ||

ಬುದ್ಧಾದ್ ಬುದ್ಧಿಸಮೃದ್ಧಿಮಾಪ್ಯ ಚ ಪುರಾ ವಿದ್ಮೋ ಗುರುಂ ಭಾರತಂ
ಚೀನಾರ್ಥೇ ಕಿಲ ವಿಶ್ವಸಂಸದಿಯತನ್ನೆಹ್ರೂ ಮುಖಾನ್ ಸೋದರಾನ್
ಏವಂ ಸಾದರಮುಚ್ಚರಂಶ್ಚ ಪುರತಃ ಪಶ್ಚಾತ್ ಕ್ಷುರಕ್ಷೇಪಕಃ
ತಂ ಚೀನಂ.ಚಿರ.ಚೋರಘೋರಪಿಶುನಂ ಜೀಯಾತ್ಪಶುಂ ಭಾರತಂ ||

॥ ೫ ॥

ಯತ್ ಸ್ವಾತಂತ್ರ್ಯ ಸುರಕ್ಷಣಾಯ ಹಿ ಪುರಾ ಶ್ರೀಷ್ಕಃ ಪ್ರತಾಪಃ ಪ್ರಭುಃ
ಪೃಥ್ವೀರಾಟ್ಚ ಶಿವಪ್ರಭುರ್ಹರಿಹರ ಶ್ರೀಕೃಷ್ಣರಾಜಾದಯಃ
ವಿದ್ಯಾರಣ್ಯ ಸಮರ್ಥ ಮುಖ್ಯ ಮುನಯಃ ರಾಜರ್ಷಯಃ ಪ್ರಾಯತನ್
ಗೋಪ್ತುಂ ಭಾರತಗೌರವಂ ರಿಪುಕುಲಂ ಸಂಯಾಪ್ಯತಾಂ ರೌರವಮ್ ॥

॥ ೬ ॥

ಘೋರೋ ಘೋರಿ ಮಹಮ್ಮದೋ ನ ಘಜನೀ ಗರ್ವಾಂಧ ಮಹ್ಮದ್‌ಶಹಃ
ಚಂಡಶ್ಚೇಂಗಿಝು ಪಂಗುಪುಂಗವ ಖಲಸ್ತೈಮೂರ್ ಅಲೆಗ್‌ಝಾಂಡ್ರಕಃ
ಯತ್ತೇಜೋಹರಣಾಯ ನಾಲಮಭವನ್ ಹೂಣಾಃ ಶಕಾಃ ಬರ್ಬರಾಃ
ತದ್ದೇಶಾಕ್ರಮಸಾಹಸೋದ್ಯತ ಮಹಾಭೂತೋಽಧುನೋಚ್ಚಾಟ್ಯತಾಮ್ ॥

॥ ೭ ॥

ಚಂಚಚ್ಚಂಚಲ ಚಂಚಲಾಚಯ ಚಮತ್ಕಾರೋಲ್ಲಸಚ್ಚಂಡದೋ-
ರ್ದಂಡೋಚ್ಚಾಲಿತ ಚಂದ್ರಹಾಸನಿಪತದ್ದೈತ್ಯಾಂಗರಕ್ತಾಂಚಿತಾ ॥
ಉನ್ನಿದ್ರಾ ರಣಭದ್ರಕಾಲ್ಯಭಯ ಚಾಮುಂಡೀ ಚ ಚಂಡೀ ಸ್ಫುಟಂ
ತೇ ರೇ ಚೀನ ವಿವೇಕಹೀನ ಮರಣಾನ್ನಾನ್ಯಾಜಘನ್ಯಾಗತಿಃ

॥ ೮ ॥

ಭೂಮಾವೇವ ಹಿ ಬುದ್ಧಿಮಾಂಶ್ಚ ಬಲವಾನ್ ದೇಶೋ ಬ್ರಿಟನ್ನಾಭಿಧಃ
ಯತ್ಸ್ಥೈರ್ಯಂ ನ ಶಶಾಕ ಸಂನಮಯಿತುಂ ವಿನ್ಯಸ್ಯ ಸರ್ವಂಗತಃ
ಕಿಂ ತತ್ರೈಷ ಕರೋತಿ ಮುಷ್ಟಿಮಿತತಜ್ಜಾಪಾನ್ ಜಿತಃ ಪ್ರಾಗಸೌ
ಚೀನಃ ಶ್ವಾನ ಇವಾವಸಾನ ಸಮಯೆ ಸಿಂಹಂ ವಿರುದ್ಧ್ಯಾಪತನ್ ॥

॥ ೯ ॥

ಭಾಮಾ ಶ್ರೀ ಬನಶಂಕರೀ ಚ ವಿಜಯಾ ಚಂಡೀ ಸುಭದ್ರಾ ತಥಾ
ಚಿತ್ರಾ ಶ್ರೀ ವಿದುಲಾ ಪೃಥಾ ದ್ರುಪದಜಾ ಮುಖ್ಯಾಃ ಪುರಾಣಾಃ ಸ್ತ್ರೀಯಃ ॥

ಶೂರಾ ವೈರಿ ಹತಿಂ ವ್ಯಧುಃ ಕಿಲ ಪುರಾ ಚನ್ನವ್ಮಾ ಲಕ್ಷ್ಮ್ಯುದಯಃ
ಯತ್ರಾಸ್ಮಿನ್ ಪುರುಷಾಖ್ಯ ಜಾತಿಪರುಷಂ ಸ್ಫೋಟೋನ್ಮುಖಂ ಪೌರುಷಮ್ ||

|| ೧೦ ||

ದೌಷ್ಯಂತೇರ್ಭರತಾದ್ಧಿ ಸರ್ವದಮನಾತ್ ಶೌರ್ಯಂ ರಿಪೂನ್ಮರ್ದನಂ
ತ್ಯಾಗಂ ದಾಶರಥೇಶ್ಚ ಗೊಮ್ಮಟವಿಭೋರೌನ್ನತ್ಯ ಸೌದರ್ಯಕಮ್ ||
ನಾಭಾಗಾದ್ ಭರತಾಚ್ಚ ವಿಶ್ವಗೃಹಿತಾಂ ಸಂಗ್ರಹ್ಯಯೋಽಭೂನ್ಮಹಾನ್
ದೇಶೋಽಯಂ ಕಿಲಭಾರತೇತಿ ಮಹಿತೋಽ ಜಿಂಕ್ಯೋನ ಶಂಕ್ಯೋಽನ್ಯಥಾ ||

|| ೧೧ ||

ಬುದ್ಧಾಶೋಕ ಮಹಾತ್ಮನಾಂ ಸುವಚನೈಃ ಶಾಂತಿಂ ಭುವೋಬೋಧಯತ್
ಶ್ರೀರಾಮಾನುಜ ಮಧ್ವ ಶಂಕರ ವಚೋಭಿಃ ಸತ್ಯಮಾವೇದಯತ್ ||
ಶ್ರೀರಾಜೇಂದ್ರ ವಿನೋಬ್ ಜವಾಹರ ಮುಖೈರ್ಭಾವೈಕ್ಯತಾಂ ವರ್ಧಯತ್
ನಿರ್ಜಿತ್ಯಾಕ್ರಮಕಾರಿ ಚೀನ ಮಧುನಾ ಜೀಯಾಚ್ಚಿರಂ ಭಾರತಮ್ ||

— **ಪಂಢರಿನಾಥಾಚಾರ್ಯ ಗಲಗಲಿ**

( ಬೆಂಗಳೂರು ಆಕಾಶವಾಣಿಯ ಸೌಜನ್ಯದಿಂದ )

# ಇಳಿ ರಣಕೆ

ಬಾ ಗಿರಿಗೆ–ಹಿಮಗಿರಿಗೆ, ಇಳಿ ಕಣಕೆ–ರಣಕೆ
ಸ್ವಾತಂತ್ರ್ಯದ ಸಂಗರಕೆ–ಸಕಲಾರ್ಪಣ ಪಣಕೆ ॥ ೧ ॥

ಬೆನ್ನಿರಿದಿದೆ, ರಣಹೂಡಿದೆ; ಮುಂದರಿದಿದೆ ಚೀನಾ !
ತಡೆಗಟ್ಟಲು, ಹಿಮ್ಮೆಟ್ಟಲು, ಅಕ್ರಮದಾಕ್ರಮಣಾ ॥ ೨ ॥

ಆ ನೀಚರ–ಚೀನೀಯರ ಸದೆಬಡಿಯಲು ಸಾಗು;
ಸಂಧಾನದ ಸವಿ ಮಾತಿಗೆ ಮರುಳಾಗದೆ ಹೋಗು ॥ ೩ ॥

ಕೊಡು ತನುಮನ ಧನ ಕನಕಾ, ಜಯ ಪಡೆಯುವತನಕಾ
ಘಾತಕ ಜನ ಮಣಿವನಕಾ, ಚೀನರು ಮಡಿವನಕಾ. ॥ ೪ ॥

ಸೋಲರಿಯದೆ, ಸಾವರಿಯದೆ, ನಡೆ ಮುಂದಕೆ ವೀರಾ !
ಇದೊ ಹಿಂದಿದೆ, ಇಡಿ ಭಾರತ, ಬೆಂಬಲಕಿಳೆ ಪೂರಾ. ॥ ೫ ॥

ಸಟೆದಿಟಗಳ ಹೋರಾಟದಿ, ಸತ್ಯಕೆ ಜಯ ಖಚಿತಾ !
ತಿಳಿದೀನುಡಿ, ಜಡಿ ಜಯನುಡಿ; ರಣಕಿಳಿವುದೆ ಉಚಿತಾ ! ॥ ೬ ॥

— ಶ್ರೀನಿವಾಸ ವೆ. ಗಲಗಲಿ

# ಆಹ್ವಾನ

೧

ಅಂದು ಬ್ರಹ್ಮದ ಒಡಲಲುರಿಯುವ
ಕ್ಷಾತ್ರತೇಜವ ಮರೆತೆವು.
ಅದಕೆ, ಗೋಳಿನ ಹಲವು ಪುಟಗಳ
ಹಾಳು ಕಥೆಯನು ಬರೆದೆವು.

೨

ಹದಿನೈದು ವರ್ಷದ ಹಿಂದೆ ನಾಡಿದು
ಅಗ್ನಿದಿವ್ಯವ ಗೆದ್ದಿತು.
ಆ ವಸಂತದ ದಿವ್ಯ ಬೆಳಗಿಗೆ
ನಾಡ ಹೊಸಮುಖ ಅರಳಿತು.

೩

ಅದೋ ರಾಷ್ಟ್ರದ ಸರ್ವ ಚೇತನ
ಒಮ್ಮೆಲೇ ಪ್ರಜ್ವಲಿಸಿದೆ.
ಕೋಟಿ ಸ್ವರಗಳ ಮೊತ್ತ ಒಂದೇ
ರಾಗದಲಿ ಮೇಳೈಸಿದೆ.

೪

ಹಳೆಯ ದಿನಗಳ ಹಲ್ಲ ಮುರಿದೆವು
ತಿರುಗಿ ಬಾರದ ತೆರದಲಿ
ನಮ್ಮ ದೈವವ ನಾವೆ ಬರೆದೆವು
ಮತ್ತೆ ಬೇರೆಯ ಪುಟದಲಿ.

೫

ನಾವು ಶಾಂತಿಯ ಹಕ್ಕಿ ಹಾರಿಸಿ–
ದಂಥ ತೇಜೋಬುದ್ಧರು.
ಸ್ವಾಭಿಮಾನದ ಹುಟ್ಟೆ ತಡವಲು
ವಜ್ರಸದೃಶ ಯೋಧರು.

೬

ಸ್ನೇಹ ಹಸ್ತವ ಚಾಚಿ ಬಂದರೆ
ನಾವು ಒಲುಮೆಯ ದೊರೆಗಳು.
ಮುಚ್ಚು ಮೋಸದಿ ಚಾಚಿ ಬಂದರೆ
ನಾವು ಸಿಡಿಲಿನ ಗಿರಿಗಳು.

೭

ತೋಳ ತಿಂಡಿಗೆ ಕಾಲ ಕೆದರುವ
ಅಣ್ಣಗಳಿರಾ, ಬನ್ನಿರಿ;
ಪುಣ್ಯ ಭೂಮಿಯ ಮಣ್ಣು ಬೇಕೆ ?
ಮಣ್ಣು ಕೊಡುವೆವು ಬನ್ನಿರಿ

೮

ಸೊಕ್ಕು ಯಾರಿಗೆ ಬನ್ನಿ ಉಕ್ಕಿನ
ಗುಳಿಗೆಯೌಷಧ ಕೊಡುವೆವು.
ರಕ್ತ ಯಾರಿಗೆ ಬನ್ನಿ ನಿಮ್ಮೆದೆ
ರಕ್ತಧುನಿ ಹರಿಗಡಿವೆವು.

೯

ದಿಕ್ಕು ದಿಕ್ಕುಗಳೆಲ್ಲ ಕೇಳಲಿ:
ಇನ್ನು ಸುಮ್ಮನೆ ನಿಲ್ಲೆವು.

ಜಗವೆ ಮುಳಿದರು ಅಂಜಲಾರೆವು,
ದೇಶ ರಕ್ಷಿಸಬಲ್ಲೆವು.

೧೦

ಪ್ರಳಯರುದ್ರನ ಕೋರೆದಾಡೆಯ
ಜಗ್ಗಿ ಜಕ್ಕಿಸಬಲ್ಲೆವು.
ಗೆಲ್ಲಬಲ್ಲೆವು, ಅದಕೆ ರಕ್ತದ
ಸುಂಕ ಕೊಡಲೂ ಬಲ್ಲೆವು.

೧೧

ಮೂರು ಶತಕದಿ ದಾಸ್ಯದೆಚ್ಚರ
ನಮ್ಮ ಕಣ್ಣಿನ ಮುಂದಿದೆ.
ಕಲ್ಪಕಲ್ಪದ ತಪದ ಸಿದ್ಧಿಯು
ನಮ್ಮ ಶಕ್ತಿಯ ಹಿಂದಿದೆ.

೧೨

ಯಾವ ಹಿಮವೂ ತಡೆಯಲಾರದು
ಋತದ ರುದ್ರಜ್ವಾಲೆಗೆ.
ಯಾವ ಶಕ್ತಿಯು ಅಡ್ಡ ಬಾರದು
ಉಗ್ರ ಸಾತ್ವಿಕ ಸೇನೆಗೆ.

— ಗಿರಡ್ಡಿ ಗೋವಿಂದರಾಜ

# ಪಾಂಚಜನ್ಯಗಳ ಕರೆ

೧

ಹಿಮಾಲಯದ ಆ ಧವಲ–ಶೃಂಗಗಳು
'ಪಾಂಚಜನ್ಯ'ಗಳನೂದುತಿವೆ
ಶಾಂತಿಯೆನ್ನುತಿಹ ತರುಣ-ಭಾರತನೆ
'ದೇವದತ್ತ' ಊದೆನ್ನುತಿವೆ.

೨

ಐದು-ಸಾವಿರದ ವರುಷದಿಂದಿರುವ
ಸಂಸ್ಕೃತಿಯೆಲ್ಲಿದೆ ? ಕೇಳುತಿವೆ
'ಬ್ರಾಹ್ಮ'ವೆಲ್ಲಿಹುದು ? 'ಕ್ಷಾತ್ರ'ವೆಲ್ಲಿಹುದು ?
ಶಾಪ-ಶರಗಳನು ಬೇಡುತಿವೆ.

೩

ಜನನಿ ಮತ್ತು ಆ ಜನ್ಮ-ಭೂಮಿಯೊ
ಸ್ವರ್ಗಕಿಂತ ಮಿಗಿಲೆಂದಿದ್ದೆ
ಎಲ್ಲಿ ಹೋಯಿತೋ ತೋಳ-ತಿಂಡಿಯದು
ದೇವ-ದೈತ್ಯರೊಡೆ ಕಾದಿದ್ದೆ.

೪

ಶತ-ಶತಮಾನದ ಹಿಮಾಲಯದ ಕರೆ
ಭಾವೈಕ್ಯದ ಗುಹೆಯಾಗಿಹುದು
ಒಂದೇ ದರ್ಶನ, ಒಂದೇ ಭಾವನೆ
ಒಂದೇ ಚೇತನ ನೀಡಿಹುದು.

೫

ಕಾಳಿದಾಸನಾ ಮೋಡ, ಯಕ್ಷಿಗದೊ
ಪ್ರಣಯವಾಕ್ಯ ಇಲ್ಲುಸಿರಿತ್ತು.
ಇದೇ ದಾರಿಯೇ ಧರ್ಮರಾಜನಿಗೆ
ಸ್ವರ್ಗದ ಮಾರ್ಗವ ತೋರಿತ್ತು.

೬

ಶಿವನು ಹಿಂದೆ ಪಾರ್ವತಿಯ ಜೊತೆಗೆ
ಪ್ರಣಯವೆಸಗಿದ– ಜಾಗೆಯಿದು
ಋಷಿಗಳಂದು ಮಾನಸದ-ಸರಸಿಯೊಳು
ಮಿಂದು ತಪಿಸಿದ ಠಾವು ಇದು.

೭

ಇಲ್ಲಿ ನೋಡೆ ಸಾವಿರದ ಮನೆಗಳಿವೆ
ಪಾವನತರ-ತನು ಕ್ಷೇತ್ರಗಳು
ಭಾರತ ಸಂಸ್ಕೃತಿ ಅಳೆಯಲು ಹೊರಟರೊ
ಮಾನದಂಡಗಳೆ ಶಿಖರಗಳು.

೮

ಹಿಂದ-ದೇಶದಾ ಧವಲ ಕೀರ್ತಿಗಿದೊ
ತುಹಿನ-ಪರ್ವತವೆ ಸಾಕ್ಷಿಯಿದೆ
ಅಭಯ-ಅಹಿಂಸಾ-ಅಸಂಗ ತತ್ವಕೆ
ನಕ್ಷೆ ಬರೆದಿರುವ ಮುಕುಟವಿದೆ.

೯

'ಹಿಂದೀ ಚೀನೀ, ಭಾಯೀ ಭಾಯೀ'
ಎಂದು ಉಸುರಿದಾ ಕಂಠಗಳೇ
ಮೋಸ-ಕಪಟದೀ ದ್ಯೂತ ಆಡುತಿವೆ.
ಕೌರವ ರಕ್ತದ ಚೀನಿಗಳೇ.

೧೦

ಸತ್ವ-ಪರೀಕ್ಷೆಯ ಕಾಲವು ಬಂದಿದೆ
ತಟಸ್ಥ ಧೋರಣೆ ಸಾಕಿನ್ನು
ಧರ್ಮ ರಕ್ಷಣೆಗೆ, ಮಾನ ರಕ್ಷಣೆಗೆ
ತೋರ್ಸೈ ಮುಂಗೈ ಜೋರನ್ನು

೧೧

'ಶಾಂತಿ ಶಾಂತಿ' ಯೆನ್ನುವ ಮನೆಗಿಂದು
ದ್ವೇಷದ ಬೆಂಕಿಯ ತೂರಿಹರು
ಕೆನ್ನೀರಿನ ಮಳೆ ಹರಿಸಿದರಲ್ಲವೆ
ಅಗ್ನಿದೇವರೂ ಒಲಿಯುವರು.

೧೨

ಮಲಗಿ ಮರೆತಿರುವವ ಪಾರ್ಥ-ಭಾರತಾ
ಮರೆತುಹೋದೆಯಾ ಪಾಠವನು
ಕಳೆದುಹೋಯಿತಜ್ಞಾತವಾಸವು–
ತೋರಿಸು ಪಾಶುಪತಾಸ್ತ್ರವನು.

— 'ಜೀವಿ' ಕುಲಕರ್ಣಿ

# ಸಮರಗೀತ

**ಎಲ್ಲರೂ—** ವ್ಯಕ್ತಿ-ವ್ಯಕ್ತಿಯೂ ಮಡಿಯಲು ಬೇಕು
ತನ್ನ ರಾಷ್ಟ್ರದಭ್ಯುದಯಕ್ಕೆ
ಮನೆ-ಮಠಗಳನೂ ತೊರೆಯಲು ಬೇಕು
ಸ್ವಾತಂತ್ರ್ಯವನಿದೊ ಉಳಿಸಲಿಕೆ........

**ಅವ—** ನೂರು ಬೀಜಗಳು ಸಾಯಲು ಬೇಕು
ಒಂದು ಮರವು ದಿಟ ಬೆಳೆಯಲಿಕೆ

**ಅವಳು—** ನೂರು ಹೂ ಕಾಯಿ ಬಾಡಲು ಬೇಕು
ಒಂದು ಅಮೃತಫಲ ಪಡೆಯಲಿಕೆ
ವ್ಯಕ್ತಿ-ವ್ಯಕ್ತಿಯೂ........

**ಅವ—** ಸಾವಿರ-ದೇಹವ ತೊರೆಯಲು ಬೇಕು
ಜೀವನ್ಮುಕ್ತಿಯ ಗಳಿಸಲಿಕೆ

**ಅವಳು—** ನೂರು ಪ್ರಯೋಗವ ಮಾಡಲು ಬೇಕು
ಒಂದು ತತ್ವವನು ಕಾಣಲಿಕೆ
ವ್ಯಕ್ತಿ-ವ್ಯಕ್ತಿಯೂ......

**ಅವ—** ಹುಲಿಯ-ದವಡೆಯಲಿ ತಲೆಯಿಡಬೇಕು
ತನ್ನ ಧೈರ್ಯವನು ತೋರಲಿಕೆ

**ಅವಳು—** ಅಗ್ನಿ ಪ್ರವೇಶವ ಮಾಡಲು ಬೇಕು
ಚಿನ್ನದಂತೆ ಶುಚಿಯಾಗುದಕೆ
ವ್ಯಕ್ತಿ-ವ್ಯಕ್ತಿಯೂ..

**ಅವ—** ಹಿಮಾಲಯವನೂ ಉಳಿಸಲು ಬೇಕು
ಶಕ್ತಿ ಕಾಳಿಯನು ಒಲಿಸಲಿಕೆ

**ಅವಳು—** 'ಶಾಂತಿ' ಮಂತ್ರವನು ತೊರೆಯಲು ಬೇಕು
ಮಾನ-ಭಂಗವನು ಅಳಿಸಲಿಕೆ

**— 'ಜೀವಿ' ಕುಲಕರ್ಣಿ**

# ಓ ! ಮದ

ಹಿಮಗಿರಿಯ ಶೈಲದೀಶ್ವೇತ ಶಿಖರದಲಿಂದು
ಕುದಿಯುತಿದೆ ಕೆನ್ನೀರ ಜ್ವಾಲಾಮುಖಿ
ನೂರು ನದಿಗಳ ತವರುಮನೆಯೆದ್ದು ದಹಿಸುತಿದೆ
ಗಂಗೆಯೂ ಅಳುತಿಹಳು ಬಿಕ್ಕಿ ಬಿಕ್ಕಿ

ಜಗದ ತಾಯಿಯು ಹಾಡಿ ಆಡಿ ಬೆಳೆದಂಗಳದ
ಪುಣ್ಯಶೈಲದಲಿಂದು ರಾಕ್ಷಸರ ಉನ್ಮಾದ
ಚವರಿಗಳು ಉರಿಹತ್ತಿ ಚಮರಿಗಳು ಓಡುತಿವೆ
ಕೊಳ್ಳಗಳ ತುಂಬಿಹುದು ಆರ್ತನಾದ

ಓ ! ಮದ ! ಭಸ್ಮಾಸುರನ ಮದವು ಬೇರೆಯಲ್ಲ
ತಾಪಸನ ತಡವಿರುವ ತಾಮಸನ ಕೊನೆಯಗೋ ದೂರವಿಲ್ಲ

ಈ ಪರಿಯ ತಾಪಕ್ಕೆ ನೀರು ಉರಿದೇಳುವುದು
ಹಿಮದ ಬಂಡೆಯು ಕಾದು ಕೆಂಡವಹುದು
ಮಾನಸದ ಹಂಸಗಳು ಸಿಡಿಲಗಳನುಗುಳುವವು
ಗಿರಿಯ ಕೋಡುಗಳೆದ್ದು ತಾಂಡವವ ಕುಣಿಯುವವು

ಓ ! ಮದ ! ಭಸ್ಮಾಸುರನ ಮದವು ಬೇರೆಯಲ್ಲ
ತಾಪಸನ ತಡವಿರುವ ತಾಮಸನ ಕೊನೆಯಗೋ ದೂರವಿಲ್ಲ

— ಜಿನದತ್ತ ದೇಸಾಯಿ

# ಹಿಮಾಲಯ ರಣರಂಗ

## ಭಾರತದ ಆತ್ಮವಿಶ್ವಾಸ

ಹಿಮಗಿರಿಯೆ ಭಾರತದ ಆತ್ಮವಿಶ್ವಾಸ.
ತೆಂಕಣದ ಕಡಲ ಗಾಳಿಯೆ ನಮ್ಮ ಶ್ವಾಸ.
ಈ ಮಾತು ಅಚ್ಚಳಿಯದಿರುವಂಥ ಸತ್ಯ.
ಸಂದೇಹ ತಾಳಿದರೆ ಅದು ಆತ್ಮಹತ್ಯ.

## ನಮ್ಮ ಹೋರಾಟ

ದಿನದಿನಕೆ ದಿನದಿನಕೆ ಮತ್ತಿಷ್ಟು ಮುಂದು.
ನಾಲ್ವತ್ತು ನಾಲ್ಕು ಕೋಟಿಯ ಹೃದಯ ಒಂದು.
ಹೋರಾಡುತಿದೆ ಕಾರ್ಯದಲಿ ನಮ್ಮ ಸೇನೆ.
ಉದಯವಾಗಿದೆ ನೋಡು ಶ್ರೇಷ್ಠ ಮುಂಜಾನೆ.

## ನಮ್ಮ ಕಾಣಿಕೆ

ನಿಮ್ಮ ಕಾಣಿಕೆ ಎಲ್ಲಿ ? ಇಲ್ಲುಂಟು ಇಲ್ಲಿ :
ಬಡವರಾದರು ನಾವು ದಿನಕೊಂದು ಬಿಲ್ಲಿ.
ಎಚ್ಚತ್ತ ಭುಜಬಲಕೆ ಅಪ್ರತಿಮ ತ್ರಾಣ.
ಭಾರತಾಂಬೆಯ ರಕ್ಷಣೆಗೆ ನಮ್ಮ ಪ್ರಾಣ.

## ಕಾರ್ಮಿಕರ ಘೋಷಣೆ

ಕೆಚ್ಚೆದೆಯ ಸೈನಿಕರೆ, ಹೋರಾಡಿ ನೀವು.
ನಿಮ್ಮ ಬೆನ್ನಿಗೆ ಕೋಟಿ ಕಾರ್ಮಿಕರು ನಾವು.
ಯುದ್ಧರಂಗದ ಅಂಗವೇ ಕಾರಖಾನೆ.
ನಡುರಾತ್ರಿಯೂ ನಮಗೆ ದುಡಿವ ಮುಂಜಾನೆ.

## ರೈತರ ಘೋಷಣೆ

ನಾವು ನೇಗಿಲ ಹಿಡಿದು ಬಡಿಸುವೆವು ಅನ್ನ.
ಶ್ರೀಮಂತರೇ, ನೀವು ಕೊಡಬೇಕು ಚಿನ್ನ.
ಕೂಲಿಯೂ ದುಡಿದುಡಿದು ನೀಡುವನು ಪಾಲು.
ಭಾರತಾಂಬೆಯ ಮಕ್ಕಳಿಗೆ ಇಲ್ಲ ಸೋಲು.

## ಮಕ್ಕಳ ಘೋಷಣೆ

ಕಿರಿಯರಾದರು ನಾವು, ಚಾಚಾಜಿ ನೆಹರು,
ಹರಿಯುತಿದೆ ನಮ್ಮ ರಕ್ತದಲಿ ಬಿಸಿನೀರು.
ಪೂರ್ಣ ತಿಳಿದಿದೆ ನಮಗೆ ಮಾವೋನ ವಿದ್ಯೆ.
ವಿಜಯ ಗಳಿಸುವ ವರೆಗೆ ನಮಗಿಲ್ಲ ನಿದ್ರೆ.

## ಚೀನದ ಹೆಬ್ಬಾವು

ಮನೆಯ ಜಗಲಿಯನೇರಿದೊಡನೆ ಹೆಬ್ಬಾವು
ಎಚ್ಚೆತ್ತು ಕೂತುಕೊಂಡೆವು, ಮಗನೆ, ನಾವು.
ದೊಡ್ಡ ಸೋಟಾ ತಂದು ಶೀಘ್ರದಲಿ ಕೊಂದೆ.
ಮಧ್ಯಾಹ್ನ ಮಲಗಬಾರದು ಇನ್ನು ಮುಂದೆ.

## ಬೆಕ್ಕಿನ ನಿರ್ಧಾರ

ಹುಲಿಯಲ್ಲ ಮಾರಾಯ! ನಾನು ಬಡ ಬೆಕ್ಕು.
ಆದರೂ ಮುರಿಯುವೆನು ಮಾವೋನ ಸೊಕ್ಕು.
ರಣರಂಗದಲಿ ನನಗೆ ಬಂದರೂ ಸಾವು,
ನೋಡಿಕೊಳ್ಳುವೆ ಒಳಗೆ ಬರದಂತೆ ಹಾವು.

# ಈ ವ್ಯಾಘ್ರ

ಲಡ್ಡಾಯಿತೆಂದು ತಿಳಿದಿದ್ದೆ ಈ ವ್ಯಾಘ್ರ.
ಈಗೆ ನೋಡಿದರಂತು ಮತ್ತಿಷ್ಟು ಉಗ್ರ.
ಬಾಹ್ಯ ರೂಪವ ನಂಬಿ ಆಯಿತು ಪ್ರಮಾದ.
ಹೀಗೆಂದು ಓಡಿಹೋದನು ಚೀನಿ ವ್ಯಾಧ.

— ದಿನಕರ ದೇಸಾಯಿ

# ಗಡಿ ಕಾಯುವ ಯೋಧರಿಗೆ

ಅಲ್ಲಿ ರಕ್ತ ಹೆಪ್ಪುಗಟ್ಟಿ ಮುಖ ನೀಲಿಗೆ ತಿರುಗಬಹುದು;
ಚಳಿಯು ಬಿಳಿಯು ನಿಶ್ಯಬ್ದತೆಗುಸಿರು ಉಡುಗಿ ಹೋಗಬಹುದು;
ಮರುಕವಿರದ ಗಗನತಲದ ಹಾಳುಸುರಿವ ಬೀದಿಯಲ್ಲಿ
ಎಂದೊ ಒಂದು ಪ್ರಬಲ ಹದ್ದು ಹಾರಿ ಹೋಗಬಹುದು, ಅಲ್ಲಿ

ಉತ್ತರ ಗಡಿನಾಡಿನಲ್ಲಿ ಲಡಖಿನಲ್ಲಿ ನೀಫದಲ್ಲಿ
ಅರ್ಧನಗ್ನ ಪರ್ವತಗಳ ವೃದ್ಧ ಶಿಲಾಭುಜಗಳಲ್ಲಿ
ನಾಡಧ್ವಜವನೆತ್ತಿ ಹಿಡಿದ ಗಡಿದಳಗಳ ಯೋಧರೆ !
ನಿರುಪಮಾನ ವೀರರೆ ! ನಿಮಗೆ ಇದೋ ವಂದನೆ !

ಒಡಬಾಳ್ವೆಯ ಕಥೆಯ ಮುಗಿಸಿ ಸೌಹಾರ್ದವ ನಿರಾಕರಿಸಿ
ಹಸಿದ ತೋಳ ಕುರಿಯ ವೇಷ ಧರಿಸಿ ಮೇಲೆ ಬಿದ್ದಿದೆ;
ಮುಡಿಯ ಬಿಚ್ಚಿ ದೀಪಾವಳಿ ನಿಮಗೆ ಎಲ್ಲ ಶುಭವ ಕೋರಿ,
ನಲವತ್ತು ನಾಲ್ಕು ಕೋಟಿ ನಿಮ್ಮ ಹಿಂದೆ ನಿಂತಿದೆ.

ಒಂದು ಜೀವದಂತೆ ನಾಡು ಕೂಡಿ ದುಡಿಯತೊಡಗಿದೆ;
ಹುಲ್ಲು ಬೆಳೆಯುವಲ್ಲಿ ಉಕ್ಕು, ಶಸ್ತ್ರೋದಯವಾಗಿದೆ;
ಯಾವ ತಂತಿಯನ್ನೆ ಮೀಟಿ ನಿಮ್ಮ ಹಾಡೆ ಜ್ವಲಿಸಿದೆ;
ಹಿತವರಿಂದ ನೆನೆದ ನೆರವು ಕಡಲ ದಾಟಿ ಬರುತಿದೆ.

ಪೀತಮುಖದ ರಾಜರಾಗುವದಕೆ ಹಿಮಾಚಲ ಸ್ವಾಹ–
ವಾಗದಂತೆ ತಡೆಯೊಡ್ಡಿದ ಯುದ್ಧ ಕಲಾನಿಪುಣರೆ !
ಗಡಿನಾಡಿನ ಪುಣ್ಯಭೂಮಿ ನಿಷ್ಕಂಟಕವಾಗುವತನಕ
ಯುದ್ಧವೊಂದೆ ಧರ್ಮವೆನುವ ಸತ್ಯ ಪರಾಕ್ರಮಿಗಳೆ !

‘ಹಿಮವೆ ವಸತಿ, ಹಿಮವೆ ಪ್ರೀತಿ, ಚಳಿಗಾಳಿಯೆ ತಾಯಿತಂದೆ,
ಹಿಮಾಚಲನೆ ಸಾಕ್ಷಿ’ಯೆಂದು ಹೋರಾಡುವ ಹುಲಿಗಳೆ !
ನಿಮ್ಮ ಜೊತೆಗೆ ನಡೆದು ಹಗೆಯಸಿರಿದು ಮಡಿದ ಹಲವರಿಹರು
ತಾರಾಗ್ನಿಗೆ ಸೇರಿಹೋದ ಮೃತ್ಯುಂಜಯನೊಕ್ಕಲು

ಭರತವರ್ಷದಿತಿಹಾಸದ ಸ್ವರ್ಣಯುಗದ ಕಲಿಗಳೆ !
ಸರ್ವಾರ್ಪಣ ಮಾಡಿ ನಿಂತ ಪರ್ವತ ಸಖ ಸಿದ್ಧರೆ !
ಕಾಲವೆಸೆದ ತೆರೆಯನೆಳೆದು ಮತ್ತೆ ನಮ್ಮ ಕಣ್ಣಮುಂದೆ
ಚಿರಪವಿತ್ರ ಭಾರತೀಯ ಧೀರಮುಖವ ತೋರಿದವರೆ !

ಉತ್ತರ ಗಡಿನಾಡಿನಲ್ಲಿ ಹೆಡೆಯೆತ್ತಿದ ಪ್ರಶ್ನೆಗೆ
ಉತ್ತರ— ಗಡಿನಾಡಿನಲ್ಲಿ ನಿಮ್ಮ ವಜ್ರಗುಂಡಿಗೆ !

— ಕೆ. ಎಸ್. ನರಸಿಂಹಸ್ವಾಮಿ

# ಜಯ ಜವಾನ

೧

ಮೋಡವೇ ಮುಂಜಾಗಿ, ನೆಲವನಪ್ಪುತ ಸಾಗಿ
ಗೌರಿಶಂಕರ ಚರಣ ತಲುಪುವಲ್ಲಿ,
ಬ್ರಹ್ಮಪುತ್ರ–ಗಂಗೆ–ಯಮುನೆಯರು ಬಾನಿನಿಂ-
ದಿಳಿದು ವೈರಿಯನು ತಳಿವ ತವರಿನಲ್ಲಿ,
ಮುನಿಗಳೆದೆಯಿಂದೊಗೆದ ಓಂಕಾರ ನಾದವೇ
ಸ್ವರ್ಗಕ್ಕೆ ಮೆಟ್ಟಿಲನು ಕಟ್ಟುವಲ್ಲಿ—
ಕಾಣುತಿಹುದೇ ನಿಮಗೆ ಒಂದು ಗೋರಿ ?
ಎಷ್ಟು ಸುಂದರ ! ಎಷ್ಟು ಭಯಂಕರ !
ನಮ್ಮ ನೆರೆಯವನೇ ಬಹಳ ಕಾಳಜಿಯಿಂದ
ಕಟ್ಟಿದ್ದು.
ಅದರೊಳಗೆ ಮಲಗಿರುವ ಪಂಚಶೀಲದ ಕೂಸು
ನಮ್ಮ ಮನೆಯಲ್ಲಿಯೇ ಹುಟ್ಟಿದ್ದು.
ನಾವೇ ದತ್ತಕ ಕೊಟ್ಟಿದ್ದು.
ಕಾಣುತಿಹುದೇ ನಿಮಗೆ ಒಂದು ಗೋರಿ ?

೨

ಹೂವು ತುಂಬಿದ ಬೊಗಸೆ; ಜೇನು ತುಂಬಿದ ಬಾಯಿ;
ನಗುನಗುತಲೇ ಬಂದ ಈ ನಮ್ಮ 'ಭಾಯಿ.'
ಬುದ್ಧ–ಬಸವ–ಗಾಂಧಿ ಹುಟ್ಟಿ ಸತ್ತಿರುವಂಥ
ನಾಡಮಕ್ಕಳು ನಾವು; 'ಬಾರಪಾ' ಅಂದೆವು.
ಮಾಲೆ ಹಾಕಿದ ಬಂದು. ಕೈಯ ಕುಲುಕಿದ–ನಾವು
ಅವನು ಕೊಟ್ಟ ಮಿಠಾಯಿ ತಿಂದೇ ತಿಂದೆವು.

೩

ವೈಯನಪ್ಪಿದ ತೋಳು ಕುಡುಗೋಲು; ಕುಲುಕಿದ್ದ
ಮೃದುಹಸ್ತ ಸುತ್ತಿಗೆಯ ರೂಪವಾಂತು,
ಹೆಗಲ ಮೇಲೆ– ಎಂದು ಹಾಕಿದ್ದ ಕೈ, ಹಾಽಗೆ
ಕುತ್ತಿಗೆಯುತನಕ ಬಂತು.

'ಬುದ್ಧಂ ಶರಣಂ ಗಚ್ಛಾಮಿ' - ಎಂದವನು
'ಯುದ್ಧಂ ಶರಣಂ ಗಚ್ಛಾಮಿ'— ಎಂದ.
ಬೋಧಿವೃಕ್ಷದ ಟೊಂಗೆ ಕಡಿದು, ಲಾಠಿಯ ಮಾಡಿ,
ನಮ್ಮ ತಲೆ ಕುಟ್ಟಲಿಕ್ಕೇರಿ ಬಂದ.

೪

ಬರಲಿ.
ಎದ್ದು ಕುಳಿತ. ಜವಾನ— ನೌಜವಾನ.
ಶಾಂತಿ–ಸತ್ಯ–ಅಹಿಂಸೆ ಬೆಳಗಿದ್ದ ನಾಡಿನಲಿ
ಪರಶುರಾಮನ ಕೊಡಲಿ ಝಳಪಿಸಿತ್ತು.
ತಾಯ ಮೈಮೇಲೇರಿ ಬಂದ ದೈತ್ಯನ ಕೃತ್ಯ
ಮಕ್ಕಳೆದೆಯಲಿ ರೋಷ ತುಳುಕಿಸಿತ್ತು.
ಮುಂದೆ ಹೊರಟ ಜವಾನ— ಧೈರ್ಯವಾನ.
ಹಡೆದವರ, ಒಡಹುಟ್ಟಿದವರ ಹರಕೆಯ ಹೊತ್ತು,
ಮುದ್ದು ಮಡದಿಯ ಹಣೆಗೆ ಇಟ್ಟು ಕುಂಕುಮ ಬೊಟ್ಟು,
ಭಾರತಾಂಬೆಯ ಹಣೆಗೆ ರಕ್ತಕುಂಕುಮವಿಡಲು,
ನುಗ್ಗಿ ನಡೆದ ಜವಾನ— ಭಾಗ್ಯವಾನ.
ಅವನು ಸುರಿಸಿದಂಥ ರಕ್ತ
ಹಿಮವಂತನ ಮಡಿಲ ಸೇರಿ
ನದಿನದಿಗಳ ನರದಗುಂಟ ಸಾಗರವನು ಸೇರೀತು !

ಸೂರ್ಯಕಿರಣದೇಣಿಯೇರಿ,
ಮೋಡವಾಗಿ ಮೇಲೆ ಸುಳಿದು,
ಮುಗಿಲತುಂಬ ನಮ್ಮ ಜಯಪತಾಕೆಯಾಗಿ ಹಾರೀತು !
ಜಯವಾಗಲಿ ಓ ಜವಾನ !
ನಮ್ಮ ಮಾನ ! ನಮ್ಮ ತ್ರಾಣ !
ಭಾರತಿಯ ಮಹಾಪ್ರಾಣ !

೫

ಬಾ ಅತಿಥಿ.
ಹಿಮಾಲಯವನೇರಿ ಇಳಿದು ದಣಿದು ಬಂದಿರುವಿ.
‘ಅತಿಥಿ ದೇವೋಭವ’— ಇದು ನಮ್ಮ ನೀತಿ:
ದೇವರಿಗೆ ಪರಲೋಕ ಬಹಳ ಪ್ರೀತಿ:
ಬಾರಯ್ಯ ಓ ಅತಿಥಿ.
ನರಕಬೇಕೋ, ಇಲ್ಲ ಸ್ವರ್ಗವೇ ಬೇಕೋ ?
ಏನಾದರೂ ಸರಿಯೆ,
ಇಲ್ಲಿಯೇ ಮಾಡುವೆವು ನಿನ್ನ ಪುಣ್ಯತಿಥಿ !

— **ಚಂದ್ರಶೇಖರ ಪಾಟೀಲ**

( ಧಾರವಾಡ ಬಾನುಲಿಯ ಕೃಪೆಯಿಂದ. )

# ನೆನಪ ನೈವೇದ್ಯ

ನಿನ್ನ ಹೆಸರು, ನಿನ್ನ ವೇಷ, ನಿನ್ನ ಕುಲಗೋತ್ರ
ಗೊತ್ತಿಲ್ಲ ನಮಗಿಂದು. ನೀನು ಬರಿಯ 'ಜವಾನ'.
ಅಮವಾಸ್ಯೆ ಇರುಳಿನಲಿ ಮುಗಿಲಿನಲಿ ಮಿನುಗುತಿಹ
ನಕ್ಷತ್ರಗಳಲ್ಲಿ ನೀನೊಂದು ನಕ್ಷತ್ರ.
ನಿನ್ನ ಸುದ್ದಿಯ ಜಾಡಿಗಾಗಿ ಅಂಚೆಯ ಹಾದಿ
ಕಾಯುತ್ತ, ಕಣ್ಣೀರು-ಕೂಳು ಕೂಡಿಯೆ ನುಂಗಿ,
ಕುಳಿತ ಹಡೆದವ್ವ-ಹಡೆದಪ್ಪ; ಗುಳದಾಳಿಯನು
ಮುಷ್ಟಿಯಲ್ಲಿಯೆ ಹಿಡಿದ ನೀರಗಣ್ಣಿನ ಮಡದಿ—
ಇರಬಹುದು ನಿನಗೆಲ್ಲೊ. ನೆಲದಾಯ ಮಡಿಲೊಳಗೆ
ಇರಬಹುದು ನೀನೆಲ್ಲೊ. ನಾಳಿನಿತಿಹಾಸದಲಿ
ಅಚ್ಚಾಗಲಿಕ್ಕಿಲ್ಲ ನಿನ್ನ ಹೆಸರು. ನಿನಗೆ
ನೆನಪ-ನೈವೇದ್ಯವೇ ನಾವು ಕೊಡಲಿಹ ಕೊಡುಗೆ.

ಹೆಸರಿರದ ಹೂ ನೀನು; ಹೂ- ಎಂಬುದೇ ಹೆಸರು.
ನಮ್ಮ ನಾಡಿಗೆ ಇಂದು ನಿನ್ನ ಕಂಪೇ ಉಸಿರು.

— ಚಂದ್ರಶೇಖರ ಪಾಟೀಲ

( ಧಾರವಾಡ ಬಾನುಲಿಯ ಕೃಪೆಯಿಂದ )

# ಡಮರುಗ ನಾದ

೧

ಸಾಮ್ರಾಜ್ಯ ವಿಸ್ತರಣ ದಾಹ ದಳ್ಳುರಿ ಪಿತ್ತ
ನೆತ್ತಿಗೇರಿತೊ ಏನೊ ?
ಪೀತವರ್ಣದ ನಂಜು ಜೀವ ಜಲ್ಲೆನುವಂತೆ
ಕಣ್ಣು ಕುರುಡಾಗಿಸಿತೊ ?
ಯುದ್ಧಜ್ವರೋನ್ಮತ್ತ ಕಾಡು ಕೋಣಗಳೆಲ್ಲ
ಕಾಲು ಕೆದರುತ ನಿಂದು
ಡುರುಕಿ ಹಾಕುತ ಬಂದು
ಹಿಮಗಿರಿಯೊಳಲ್ಲಲ್ಲಿ
ಹುಡಿಯ ಮೈಲಿಗೆಯಲ್ಲಿ
ಧೂಳ ಧೂಸರ ಮಾಡಿ ಹುಚ್ಚೆದ್ದು ಚೀರಿದವು;
ಸಿಡಿಗುಂಡು ಮದ್ದುಗಳ ಕಾರಿದವು.
ನೆತ್ತರೋಕುಳಿಯಾಡಿ ಹೆಣದ ಬಣವೆಯನೊಟ್ಟಿ
ಮೈ ನೆಕ್ಕಿಕೊಳ್ಳುತಿವೆ ಕಾಡು ಕೋಣಗಳಿಂದು.

೨

ಈ ನಾಡಿನುತ್ತರದ ಭದ್ರ ಭದ್ರಾಚಲದಿ
ಯುಗಯುಗಗಳಿಂದಲೂ ಧ್ಯಾನಸ್ಥ ಪರಶಿವನ
ನಾದಲೀಲಾ ಕೋಟಿ ಭಾರತಿಯ ಕಾಯುತಿದೆ.
ಡಮರುಗದ ಢಂಕಾರ
ಶಿವಮಂತ್ರದೋಂಕಾರ
ಹೆದೆಬಿಲ್ಲ ಟಂಕಾರ
ಶಿವ ಶಂಖ ಭೋಂಕಾರ
ಭಾರತಿಯ ರಕ್ಷೆಗಿದೆ.
ಹಿಮಗಿರಿಯ ಪುಣ್ಯಗಿರಿ, ಭಾರತಿಗೆ ಹಿರಿಯ ಗರಿ.

ಕಲ್ಲು ಮಣ್ಣಿನ ಕಾಡು ಬೆಟ್ಟದ ಸಾಲ ನಿರ್ಜೀವ
ಹಿಮಕಣದ ಕೋಡುಗಲ್ಲಿನ ಬೀಳು ಬಂಜರದ
ಭೂಮಿಯಲ್ಲವೊ ಭಾಯಿ ! ನಾಲ್ವತ್ತು ಕೋಟಿಗಳ
ಜೀವ ಪ್ರಾಣದ ನಂಟು, ಶಿವ ತಪಸ್ಸಿನ ಭೂಮಿ.
ನಮ್ಮ ದೇವರ ತಾಣ,
ನಮಗೆ ಪಂಚಪ್ರಾಣ.
ಹಿಮಗಿರಿಯ ಗೌರಿಯೇ ವೈಭವದ ಸೌಭಾಗ್ಯ;
ಭಾರತಿಯ ಭಾಗ್ಯ.

೩

ಕೇಳದೋ ಕೇಳಲ್ಲಿ !
ನೆತ್ತರಿನ ಹೊನಲಲ್ಲಿ ಹೊರಳಾಡಿ ಕೆಂಪಾದ
ಕಾಡು ಪ್ರಾಣಿ ! ಶಿವನ ಡಮರುಗ ನಾದ !!
ಶಿವ ತಪಸ್ಸಿನ ಭಂಗ
ಪರಿಣಾಮ ಕೇಳುವಿಯ ಡಮರುಗನಾದ ತರಂಗ !
ಹಿಮಗಿರಿಯ ಗುಹೆಯಲ್ಲಿ ಬಯಲಲ್ಲಿ ಶಾಂತ ಪ್ರ-
ಶಾಂತ ಗಂಭೀರ ರುದ್ರಭೀಕರ ಸನ್ನಿಹಿತ
ಪ್ರಕೃತಿ ಮಾತೆಯ ಮಡಿಲು ಮಡಿಲುಗಳಲ್ಲಿ
ತಾಣ ತಾಣಗಳಲ್ಲಿ ಕೇಸರಿಡುತಿದೆ ಕೇಳು
ಭಗ್ನ ರೋಷದ ಕಿಚ್ಚು ಹರಡಿರುವ ಡಂಗುರ ಧ್ವನಿ.
ಶಿವಗಣದ ಜಾಂಗಟೆ, ತುತ್ತೂರಿ, ಭೇರೀರವ
ಶಿವನ ಕೆಣಕಿದ ನರನು ಬಾಳುವನೆ ?
ಕಿಡಿಗಣ್ಣ ವೀರಭದ್ರನ ಕರೆದು
ಕಾಯಲಾರಳೆ ಗೌರಿ ?

೪

ಹೊಲಸು ಹಳದಿಯ ಬಣ್ಣ ಚಿಪ್ಪುಗಣ್ಣ ಜೋಡಿ
ನಿನಗೇನು ಬಂತು ? ನಿನಗೇನು ಧಾಡಿ ?

ನಡೆಯಾಚೆ ತೊಲಗಾಚೆ ಗಡಿ ತೆರವು ಮಾಡಿ
ಮತ್ತೆ ಬಗುಳದಿರು 'ಭಾಯಿ ಭಾಯಿ'
ಮುಚ್ಚು ಬಾಯಿ.
ಮುಚ್ಚದಿರೆ !
ಓ ! ಹಿಮಗಿರಿಯ ಗೌರಿ ! ನಿನ್ನೊಡಲು ಬಗೆದು
ಬಂದವರ ಗೋರಿಗಿಳಿಸುವೆವು;
ಬದ್ಧ ಪ್ರತಿಜ್ಞರು ನಾವು.
ಓ ! ಭಾಯಿ !
ಯುದ್ಧವೆಂದರೆ ನಿನಗೆ ಕಗ್ಗೊಲೆಯೆ ಮಾತ್ರ
ಭಾರತೀಯರಿಗದುವು ಪೂಜೆಯಯ್ಯ.
ತ್ಯಾಗ ಬಲಿದಾನಗಳ ಸೇವೆಯಯ್ಯ.
ತಾಯಿ ಭಾರತಿಗಾಗಿ 'ಯುದ್ಧ್ಯಸ್ವ, ಯುದ್ಧ್ಯಸ್ವ
ಅರ್ಪಿಸು ಸರ್ವಸ್ವ' ಎನ್ನುತಿದೆ
ಜೀವಂತ ಭಾರತದ
ಜೀವ ವಾಣಿ.

೫

ಬಂದಂತೆ ಬಂದೆ, ಭರಭರನೆ ಬಂದೆ
ಹುಚ್ಚೆದ್ದ ನಾಯಿ ದಿಕ್ಕೆಟ್ಟು ಓಡುವಂತೆ.
ಬಂದಂತೆ ಹಿಂದೆ ಹೆಜ್ಜೆಯೊಂದೊಂದೆ
ಜಾರುಬಂಡೆಯ ಕಲ್ಲು ತಡೆದುರುಳುವಂತೆ.
ಏನಿದರ ತಂತ್ರ ?
ಯಾವುದಿದು ಮಂತ್ರ ?
ಹೇಳಿ ಮಾಡಿಸಿದಂಥ ಕುತಂತ್ರ.
ನಾ ಬಲ್ಲೆ ಗತ್ತ
ಮತ್ಸರದ ಹುತ್ತ
ಹಾವು ಭುಸುಗುಡುತಿಹುದು.
ಮತ್ಸರದ ಹುಳ ನೀನು;
ಕಾರಿಕೆಯೆ ಕೂಳು ನಿನಗೆ.

೬

ಎದ್ದು ಹೋದರು ಕೂಡ ಸದ್ದೇಕೆ ಮಾಡುತಿಹೆ ?
ಆಶೆಗಣ್ಣುಗಳಿಂದ ಮತ್ತೇನು ನೋಡುತಿಹೆ ?
ಹಿಮಗಿರಿಯ ಕಂದರವೆ ? ನೇಫಾದ ಹಂದರವೆ ?
ಲಡ್ಡಾಕ ಕೊಳ್ಳದಲಿ ಬಾಯಿ ನೀರೂರಿತೇ ?
ಇಲ್ಲವೆ, ಭಾರತೀಯರ ಶಕ್ತಿ ಸನ್ನಾಹ-
ದುಬ್ಬರಕೆ ದಿಗ್ಭ್ರಾಂತಿಯಾಯಿತೆ ?
ಓ ಹಾವೆ ! ಡ್ರ್ಯಾಗನ್ ! Let thou be gone–
ಹೊಟ್ಟೆ ಹೊಸೆಯುವ ಹುಳವೆ, ಮತ್ತೇನು ನೋಡುತಿಹೆ ?
ಹಸಿಹನಿವ ನಾಲಗೆಯ ಚಪ್ಪರಿಸುತಿಹುದೇನು ?
ಕಾಡ ಬೇಟೆಯ ನಾಯಿ ನಾಲಗೆಯ ಚಾಚುವಂತೆ.

೭

ಓ ! ನೀನೆದ್ದು ಬಂದ ದಿನ,
ನ್ಯಾಯದೇವತೆ ತನ್ನ ಗದ್ದುಗೆಯನಿಳಿದವಳು
ಮತ್ತೆ ಏರಲೆ ಇಲ್ಲ.
ಸತ್ಯ ಪ್ರೀತಿಗಳೆಲ್ಲ
ಸತ್ತು ಹೋದವು ನೋಡು, ಸುಳ್ಳು, ವಂಚನೆ, ಮೋಸ
ಆತ್ಮವಿನಾಶ.
ಶಾಂತ ಪ್ರಶಾಂತ ಹಿಮಗಿರಿಯ ಶೃಂಗದಲಿ
ರಕ್ತಧಾರೆಯ ಚಿಮ್ಮಿ, ಶಿವನ ಜಡೆ ತೋಯಿಸಿತು.
ಸಣ್ಣ ಕಂದಮ್ಮಗಳ ಕಣ್ಣು ಕವಡೆಗಳಲ್ಲಿ,
ಚಿಮ್ಮಿತು ಕಣ್ಣೀರು.
ತಾಯಿ ತಂದೆಗಳ, ಅಕ್ಕ ತಂಗೆಯರ
ಹೃದಯದ ಬಿಸಿ ನೀರು,
ಗೋಳಿನ ಜಳದುಸಿರು.

೮

ಓ ! ಏನು ಮಂತ್ರವು ಭಾಯಿ ! ಶಾಂತಿಪಾಠದ ಸೋಗು !
ಏನೆಂದಿ ? ಶಾಂತಿ ಬೇಕು........ಹಾಂ-ಹಾಂ !
ಈ ಬಾಯಿಯಿಂದಲೇ ಮತ್ತೇನು ಬೇಡುತಿಹೆ ?
ನೇಫಾ ಬೇಕು, ಲಡಾಕ ಬೇಕು.
ಭಪ್ಪರೆ ! ಶಾಂತಿಯ ತಿರುಮಂತ್ರ
ಗೊತ್ತಿದೆ ಹೂಣರ ಹೊಸ ತಂತ್ರ.
ಹೊತ್ತಿತು ! ಹೊತ್ತಿತು ! ಹೊತ್ತಿತು ಬೆಂಕಿ !
ಭಾರತೀಯರ ಶಾಪದ ಬೆಂಕಿ !
ಜಗದ ಬಣವೆಗೆ ಹತ್ತಿತು ಬೆಂಕಿ !
ವಿಶ್ವಶಾಂತಿಗಿದು ಎದೆಯುರಿ ಬೆಂಕಿ !
ಬಲ್ಲೆಯಾ, ಬಡ ಜಂತು !

೯

ನಿಂತಲ್ಲೆ ನಿಂತುಬಿಡು ಮತ್ತೆದ್ದು ಬರಬೇಡ
ವಿಶ್ವಶಾಂತಿಯ ಮತ್ತೆ ಕೆಣಕಬೇಡ.
ಶಿವನ ಡಮರುಗ ನಾದ ಕೇಳಲೊಲ್ಲದೆ ನಿನಗೆ ?
ವೀರಭದ್ರನ ಕೊಡಲಿ ಕಾಣಲೊಲ್ಲದೆ ನಿನಗೆ ?
ನೋಡದೋ ನೋಡಲ್ಲಿ !
ಭಾರತಿಯ ಬಾವುಟವು ಗಡಿಯಾಚೆ ನಿಂತರೂ
ಕಾಣುತಿದೆ, ನೋಡಿ ವಂದನೆ ಮಾಡು.
ಬಾನಂಚೊಳು ನೆರೆಮಿಂಚಿದ
ಜಯ ಬಾವುಟವಿಂದು
ಜಯ ವಂದನೆ ಮಾಡು.
"ಶಾಂತಿ ಸಮರಕಿದು ಜಯಭೇರಿ
ವಿಶ್ವಶಾಂತಿಗಿದು ಹೊಸ ದಾರಿ".

— **ಕೃಷ್ಣಮೂರ್ತಿ ಪುರಾಣಿಕ**

# ವೀರಪ್ರತಿಜ್ಞೆ

೧

ಓ ! ತಾಯೆ ಹೊರಟಿಹೆನು ನಾಡಗಡಿಗೆ
ಜಯಮಾಲೆ ತರುವೆ ನಾ ನಿನ್ನ ಮುಡಿಗೆ ।
ನಿನ್ನ ಅಡಿದಾವರೆಗೆ ನಮಿಸುತಿಹೆನು
ಯಶಗಳಿಸಿ ಬಾ ಎಂದು ಹರಸು ನೀನು

೨

ನಾಡಗಡಿಯಲಿ ಆ ದುಷ್ಟನಾ ಸಂಚು
ಅವಗೆ ಮಾಡುವೆನು ಸರಿಯಾದ ಹೊಂಚು ।
ವೀರರಕ್ತವ ಪಡೆದ ಮಾತೆಯು ನೀನು
ನಿನ್ನ ಎದೆಹಾಲಿನಲಿ ಬೆಳೆದವನು ನಾನು

೩

ಸಿಂಹವು ಶಿಶುವಾದರೇನು ತಾ ಕಡಿಮೆ ?
ಇಲ್ಲವೆ ಅದಕೇನು ಹಿರಿದಾದ ಬಲುಮೆ ? ।
ಕುದಿಯುತಿದೆ ದೇಹದಲಿ ನನ್ನ ಬಿಸಿರಕ್ತ
ಬೇಡುತಿದೆ ರಕ್ಕಸರ ಬಲಿದಾನ ಮೊತ್ತ

೪

ಹಿಂದೊಮ್ಮೆ ಬಂದಿತ್ತು ಸ್ವಾತಂತ್ರ್ಯ ಕರೆಯು
ಹಿರಿಮೆಯಲಿ ಬೆಳಗಿತ್ತು ಈ ನಾಡಧರೆಯು ।
ಕನ್ಯಾಕುಮಾರಿ ಕಾಶ್ಮೀರವರೆಗೆ
ಕಾದಿದೆ ಸೈನ್ಯವು ನಿನ್ನೀಕರೆಗೆ

೫

ಹಾಡುವೆ ಸತ್ಯಶಾಂತಿಯ ನಾಂದಿ
ಹೇಳಿದ ತಾತ ಮಹಾತ್ಮಾಗಾಂಧಿ ।
ಸ್ಮರಿಸುವೆ ಅವನನು ಭಕ್ತಿಯಲಿಂದು
ಬೇಡುವೆ ಸತ್ಯಕೆ ಜಯನೀಡೆಂದು

೬

ಕಾದುವೆನು ರಣದಲ್ಲಿ ಕೊನೆತನಕವು
ದೇಹದಲಿ ಹನಿರಕ್ತ ಇರುವನಕವು ।
ಮರಣಬಂದರೆ ಬರಲಿ ಹರುಷದಲಿ ಮಡಿವೆ
ಕೊನೆಯ ಬಿಸಿಉಸಿರಿನಲೂ ನಿನ್ನನೇ ನೆನೆವೆ

— ಸಿ. ವ್ಹಿ. ಪ್ರಭುಸ್ವಾಮಿ

# ಮೆಟ್ಟು ಈ ಕಾಳಿಂಗ

೧

ಕಣ್ಮುಚ್ಚಿ ಕೈಕಟ್ಟಿ ಕುಳಿತುಕೊಳ್ವುದು ಬೇಡ
ಆಪತ್ತು ಕಾದಿಹುದು ನಾಡಗುಡಿಗೆಽ;
ಬರಸಿಡಿಲು ಬಡಿದಿಹುದು ನಾಡಗಡಿಗೆ.
ಏಳಿ, ಎದುರಿಸಲೇಳಿ ನಾಡಿಗೊದಗಿದ ಕೇಡ,
ಏಳಿ ತೀರಿಸಿಕೊಳ್ಳಿ, ಬಿಡದೆ ಈ ಸೇಡಽಽ.

೨

ಆ ದುಷ್ಟ ಚೌ ಎನ್‌ಲಾಯ್ ಇರಿವೆ ಜೊಂಡಿಗ ನೆಕ್ಕಿ
ದೌರ್ಜನ್ಯದಲಿ ಮುಂದೆ ಸಾಗುತಿಹನು;
ಕ್ರೌರ್ಯವಂಚನೆಗಳಲಿ ಬೀಗುತಿಹನು.
ರಾಜ್ಯದಾಹಕೆ ಸಿಕ್ಕು ತಿಂತಿಂದು ಮೈಸೊಕ್ಕಿ,
ಹೋಗುವನು ನಿಶ್ಚಿತವು ಕೊನೆಗೆ ಮಣ್ಣನು ಮುಕ್ಕಿ.

೩

ಕೊಡ್ಲಿ–ಕುಡಗೋಲುಗಳು, ಆ ಬಡಿಗೆ–ಬರ್ಚಿಗಳು
ಕವಣೆಗಲ್ ಖಡ್ಗಾಸ್ತ್ರ ಹಿಂದಾದವುಽ;
ಭಲ್ಲೆ–ಢಾಲುಗಳೆಲ್ಲ ಸಂದಾದವುಽ.
ಇಂದು ವಿಜ್ಞಾನಯುಗ; ಟ್ಯಾಂಕ್–ರೆನೇಡ್ಸುಗಳು
ಬೇಕು ಮೋಣ್ ಬಗೆ ಬಗೆಯ ಆ ಮಶಿನ್‌ಗನ್ನುಗಳು.

೪

ವಿಧ ವಿಧದ ಆಧುನಿಕ ಯುದ್ಧದುಪಕರಣಗಳು
ಬೇಕಿಂದು ನಮಗೆ ಈ ಕಾಳಗದಲಿಽ;

ಸಜ್ಜಾಗಿ ನುಗ್ಗಲಿಕೆ ಮೋಳವದಲಿSS.
ಸಂದಂತೆ ಅಂದು ಆ ದಧೀಚಿಯ್ಞS ಅಸ್ಥಿಗಳು,
ಅರ್ಪಿತವು ರಾಷ್ಟ್ರಕ್ಕೆ ಸಕಲ ಸಂಪತ್ತುಗಳು.

೫

ಚೀನದೊಂದಿಗೆ ಇದ್ದ ನಮ್ಮ ಆ ಒಡನಾಟ
ಹಾವ್ಗೆ ಹಾಲೆರೆದಂತೆ ಆಯ್ತು ಈಗ;
ಭುಸುಗುಟ್ಟಿ ಕಚ್ಚಿತಾ ಚೀನ ನಾಗS.
ಕಿತ್ತಿ ಕಾರುವ ತೆರದಿ ಆ ಕಾಳಕೂಟSS
ಮೆಟ್ಟು ಈ ಕಾಳಿಂಗ ತೋರಿ ಕೃಷ್ಣನ ಆಟ.

— ಎಸ್. ಎಸ್. ಬಸುಪಟ್ಟದ

# ಹಾಡು

ಬಿಲ್ಲು ಬಾಣ ಗದೆ ಕತ್ತಿ ಕೊಡಲಿಗಳು
ಹಳಿಯು ಜೊಳ್ಳು ಕೈದು
ಹಂಡೆ ನೀರನೂ ಕಾಸಲಾರೆ ನೀ
ಬಚ್ಚಲೊಲೆಗೆ ಒಯ್ದು

ಹಲಲ ಕೀಹ ಬರಿ ಬೊಬ್ಬೆ; ಇರಲಿ ಅದು
ಯಕ್ಷಗಾನಕೇನೇ
ಯುಕ್ತಿಯಿರದೆ ನೀನೆಷ್ಟು ಕುಟ್ಟಿದರು
ನೋವು ನಿನಗೆ ತಾನೇ !

ಪಾರ್ಥ, ಹಗೆಯು ತೆಗಳಿದರೆಯೇನು ಫಲ ?
ತಿಳಕೊ ಅವನ ಗತ್ತು
ನೂರು ತತ್ವಗಳಿಗಿಂತ ಒಂದು ಕೃತಿ
ಒಂದು ಜಯವು ಹೆಚ್ಚು

ಶಕ್ತಿಯಿಲ್ಲದೇ ಸತ್ಯ ಗೆಲುವದೇ ?
ಶೀಲ ಹೇಡಿಗಲ್ಲ
ಕೈಯಲಾಗದೇ ಲೇಸಕೋರ್ವ ತಿಳಿ-
ಗೇಡಿ ಇಲ್ಲಿ ಸಲ್ಲ

ಹಂಗುದೊರೆದು ಬರಿ ಹುಂಬನಂತೆ
ಹೋರಾಡಿ ಸಾಯಲೇಕೆ ?
ನೂರು ಯುದ್ಧಗಳ ಗೆಲುವ ಶಕ್ತಿಯಿದೆ
ಜಿಹ್ವೆಯಲ್ಲಿ ಜೋಕೆ !

ಯುದ್ಧಗೈಯದೇ ಗೆಲುವ ಕಲೆಗೆ ಸ-
ನ್ನದ್ಧನಾಗೊ ಧೀರಾ
ಹೊಸದೊಂದು ಗೀತೆ ಮೊಳಗಿಸುವ ಕಾಲ
ಇನ್ನಿಲ್ಲ ಬಹಳ ದೂರ.

— ವಿ. ಜಿ. ಭಟ್ಟ

# ನರಿಗೆ ಬಂದಿದೆ ಹರೆ

೧

ನರಿಗೆ ಬಂದಿದೆ ಹರೆ
ಹಳದೀ ನರಿಗೆ ಬಂದಿದೆ ಹರೆ
ಇಲ್ಲ ಯಾರ್‍ಯಾರ ಖಬರ
ಚಕ್ರವರ್ತಿಯು ಜಬರ !

ಹೊಳೆಯ ಮೇಲ್ದಂಡೆಯಲ್ಲಿದ್ದು
ಕೆಳದಂಡೆಗಿದ್ದ ಕುರಿಗೆ
‘ ಕಲಕದಿರು ನೀರ
ಕಲಕದಿರು ನೀರ ! ’–
ಎಂದೆನುತ ಕಾಲ್ಕೆದರಿತು,
ಜಿಗಿಜಿಗಿದು ಜಗಳಕ್ಕೆ ಬಂತು !

ಜಗಳಕ್ಕೆ ಬಂತು
ಮೇಲೇರಿ ಬಂತು
ಮರುಚಣಕೆ ಹೌಹಾರಿ
ಹಿಂದೋಡಿತು !
ಹೌಹಾರಿ ಹಿಂದೋಡಿತು !
ಏಕೆ ಗೊತ್ತೆ ?
ಕುರಿಯಲ್ಲ ಕೇಸರಿ !
ಅದು ಕುರಿಯಲ್ಲ ಕೇಸರಿ !

೨

ನಿದ್ರೆಗೈಯುವ ಹುಲಿಯ ಬಾಲವ
ಎಳೆದು ನೋಡಿತು ಒಂದು ಕಪಿ !
ಜಗ್ಗನೆದ್ದಿತು ಹಿಡಿಯಹೋಯಿತು
ಗಿಡವನೇರಿತು ಅದೋ ಕಪಿ !

ಗರ್ಜನೆಗೆ ಗಡಗಡನೆ ನಡುಗಿತಾದರು
ಕಿಸ್‌ಕಿಸನೆ ಅಣಕಿಸೆಂದಿತು !
'ನೀನೇರ ಬಲ್ಲೆಯಾ ಎಲೆ ಹುಲಿರಾಯ ?'
'ಇಲ್ಲಿಲ್ಲ ಹಿಹ್ಹೀ'— ಎಂದಿತು !

ಹಗಲು ರಾತ್ರಿ ಗಿಡದ ಕೆಳಗೆ
ಹುಲಿಯು ಕಾವಲು ಕೂತಿದೆ !
ಬೇರೆ ಗಿಡಗಳು ಬಳಿಯೊಳಿಲ್ಲದೆ
ಅಲ್ಲೆ ಕೋತಿಯು ಜೋತಿದೆ !
ತಿನಲು ಹಣ್ಣುಗಳಿಲ್ಲದೆ
ಸೋತು ಕಣ್‌ಕಣ್ ಬಿಡುತಿದೆ !
ಕೆಳಬೀಳಲೇಬೇಕು
ಇಂದಿಲ್ಲ ನಾಳೆ !
ಹುಲಿಯು ಬಾಯೊಳೆ
ಇಲ್ಲ, ಕಾಲಮೇಲೆ !

೩

ಸತ್ಯಕ್ಕೆ ಗೆಲವು ಎಂದೆಂದು
ಸುಳ್ಳಿಗಲ್ಲ !
ನಮ್ಮ ಪಾಲಿನ ಸತ್ಯ
ಸಂತತ ಸ್ವಾತಂತ್ರ್ಯ
ಅದು ಗೆಲ್ಲಲೇಬೇಕು !
ಅದಕೆಮ್ಮ ತ್ಯಾಗ ಸರ್ವಸ್ವ
ಸಲ್ಲಲೇಬೇಕು !

— ಭುಜೇಂದ್ರ ಮಹೀಶವಾಡಿ

# ಕೈ ಹಚ್ಚಿ ನೋಡು ಅದು ವಜ್ರಾಯುಧ

೧

ತುರಿಸಹೋದವನೆದೆಗೆ
ಹಾಯ್ದು ಕೆಡವಿತು ಒಂದು ಹೋರಿ !
ಸೇಡು ತೀರಿಸೆ ತಿರುಗಿ ಹಾಯಲು
ಹೋರಿಯಾಗಲಿ ಬೇಕೆ ಹೋರಿ ?
ಅದು ಪಶು,
ಇವ ರೈತ !
ಹಿಡಿದು ಕೆಳಕೆಡವಿ ಗುದ್ದಿ
ಕಲಿಸಲೇ ಬೇಕದಕೆ ಬುದ್ಧಿ !
ಮೊಣಸುಗೊಂಬಿಗೆ ಅಣಸು ಹಾಕಿ
ಮೂಗಿನಲಿ ಮುಗದಾಣ ತುರುಕಿ
ಹುರಿಬೀಜಗಳ ಬಿಡದೆ ಜಜ್ಜಿ
ಹೂಡಿ ಹೊಡೆಯಲೆ ಬೇಕು ಹಾಕಿ ಒಜ್ಜಿ !
ಅದು ಪಶು,
ಇವ ರೈತ !
ಹಿಡಿದು ಕೆಳಕೆಡವಿ ಗುದ್ದಿ
ಕಲಿಸಲೇ ಬೇಕದಕೆ ಬುದ್ಧಿ !

೨

ನಮ್ಮ ಆಚಾರ ಹರಿವ
ಆಚಾರಿ ಮೋನಪ್ಪ ಅಯ್ಯೊ ಪಾಪ !
ಮುಪ್ಪಿನಲಿ ಮೀನು ತಿಂದು ಸತ್ತನಪ್ಪ !
ಪಶ್ಚಾತ್ತಾಪ ಅಯ್ಯೊ ಪಶ್ಚಾತ್ತಾಪ !
ನಮ್ಮವನು ಆಚಾರಿ,
ಅವನೆದುರಾಳಿ ಹೇಳಕೇಳಿ ಅನಾಚಾರಿ !
ಹಸಿದ ರಕ್ಕಸನವನ
ಮೈಯೊಳಗೆ ಸಂಚಾರಿ !

ಅನ್ನ ಸಾಲದೆ ಕುರಿ ಹಂದಿ ನರಿ ನಾಯಿ ತಿಂದ
ಇಲಿ ಹೆಗ್ಗಣ ಇರುವೆ ಜೊಂಡಿಗ ಉಂಡ !
ಸಾಲದಕೆ ಹೆಬ್ಬೆಟ್ಟ ತಿಬ್ಬೆಟ್ಟಗಳ ತಿರುಗಿ
ಬಾಯ್ ಮುಂದೆ ಬಂದ ಹಸಿರನ್ನ
ಹಡಬಡಸಿ ನುಂಗಿದನೋ
ಹಸಿರೊಡನೆ ಕೈಯ ಕುಡಗೋಲನೂ !
ಕರುಳನ್ನೆ ಕತ್ತರಿಸಿ ಹಾಕಿ
ಹೊರಬೀಳಲಿನ್ನೇನು ಬಾಕಿ ?

೩

ಲಾಮಾನ ಲಾಸಾ
ಮಾವೋನ ಗ್ರಾಸಾ !
'ಅಲ್ಲವೋ ಅಲ್ಲವಿದು ಲೇಸಾ'—
ಬುದ್ಧಿ ಹೇಳಿದವನೊಡನೆ
ಗುದ್ದಾಡುವುದೆ ? – ಛೇಷ !
ಗುರುವಿನ ಮುನಿಸಿಗೆ ಕಾರಣವಾದಿ
ಬೇರಿನ್ನಾವುದೊ ಹಾದಿ ?
ಬುದ್ಧನು ಕಟ್ಟಿದ ಕೊರಳಿನ ಗುದ್ದಿ
ಇನ್ನೂ ಕಲಿಸಿಲ್ಲವೆ ಬುದ್ಧಿ ?
ಅಲ್ಲೊ, ವೈಮರೆತ ವೇಳೆಯಲಿ
ಮೇಲೇರಿ ಬಂದರಾಗುವುದು ಗೆಲ್ಲೊ ? ಗುಲ್ಲೊ ?
ಅಲ್ಲಲ್ಲ, ಬೆಂಕಿ ಎದುರಿನ ಒಣ ಹುಲ್ಲೊ ಎಲೆ ಹುಲ್ಲೊ
ಫರ್‌ಫರನೆ ಉರಿದೆ ಉರಿವುದು ಅನ್ಯಗತಿ ಇಲ್ಲೊ !
ಅಹಿಂಸೆ ಎಂದರೆ ಬರಿ ಬೂದಿ ಎಂದೆಯ ?
ಅದನೂದಿ ನೋಡು ಒಳಗಿಹುದು ಕೆಂಡ !
ಶಾಂತಿ ಮಂತ್ರ ಬರಿ ಹಸಿರು ತಂಪೆಂದೆಯ ?
ಕೈ ಹಚ್ಚಿ ನೋಡು ಅದು ವಜ್ರಾಯುಧ !

—ಭುಜೇಂದ್ರ ಮಹೀಶವಾಡಿ

# ಒಂದಾಗು !

ಒಂದಾಗು ಒಂದಾಗು ಒಂದಾಗು ಬಾ ಬಂಧು,
ಮಿಡಿಯುಲೊಂದೇ ಜೀವಭಾವ ಸ್ಪಂದನವು !
ಒಂದೆ ಭಾರತ ನೆಲವು, ಒಂದೆ ಭಾರತ ಕುಲವು,
ನಾಡಿನೇಳ್ಗಿಗೆ ಸಲಲಿ ಬುದ್ಧಿ ಬಲ ಸಂಪದವು !!

ಭಾಷೆ ಭಾಷೆಯ ಮೋಹ, ಕುಲಗೋತ್ರ ವ್ಯಾಮೋಹ
ಹುಚ್ಚೆದ್ದು ಕುಣಿಯುತಿವೆ ತಾಳಗೆಟ್ಟು !
ಸ್ವಾರ್ಥ ಲೋಭದ ಸಣ್ಣ ಕ್ರಿಮಿ ಕೀಟ ಹಿಂಸೆಯಲಿ
ಭಾವೈಕ್ಯ ಕ್ಷೇಮಕ್ಕೆ ದೊಡ್ಡ ಕುತ್ತು !

ಎಚ್ಚರಿಕೆ ಎಚ್ಚರಿಕೆ ತಿಳಿಗಣ್ಣು ತೆರೆಯಿನ್ನು
ಸಾಕಿನ್ನು ಒಣದಾದ ಒಳಭೇದ ತಂಟೆ !
ನನ್ನ ಗಡಿ ನಿನ್ನ ಗಡಿ ನುಂಗಲೆಂದಿನ್ನೊಬ್ಬ
ಹೊಂಚು ಹಾಕಿರುವನಗೊ ಕಳ್ಳನಂತೆ !

ನಾನಾರು ನೀನಾರು ? ನೆನಪಿರಲಿ ನೆನಪಿರಲಿ
ನಾನು ನೀನೂ ಮೊದಲು ಭಾರತೀಯ !
ನನ್ನುಸಿರು ನಿನ್ನುಸಿರು ತಾಯಿ ಭಾರತಿಯುಸಿರು,
ಅವಳ ಕ್ಷೇಮವೆ ನಮ್ಮ ಮುಖ್ಯ ಧ್ಯೇಯ !

ನನ್ನ ಬಲ ನಿನ್ನ ಬಲ ಬೆಸೆಯೋಣ ಬಾ ಬಂಧು
ಮತಿಗೆ ಮತಿ ಕೂಡಿದರೆ ದಿವ್ಯಜ್ಯೋತಿ !
ಒಟ್ಟಾಗಿ ಅಟ್ಟೋಣ ಆ ಕಳ್ಳ ಕಪಟಿಯನು
ಜೊತೆಗೆ ಜೊತೆ ಸೇರಿದರೆ ವಜ್ರಶಕ್ತಿ !!

ವ್ಯಷ್ಟಿಗೆ ಸಮಷ್ಟಿಯಲಿ ಭಾರತದ ವೃದ್ಧಿಯಲಿ
ತಿಳಿಯಣ್ಣ ಸರ್ವಾರ್ಥ ಸಿದ್ಧಿಯೆಂದು !
ನಾನು ನೀನೂ ಒಂದು– ಈ ಭಾವ ತಳೆದಂದು
ಎದುರು ನಿಲ್ಲುವನಾವ ಚದುರ ಹುಮ್ಮಸಗೊಂಡು !!

— ಬ. ಗಿ. ಯಲ್ಲಟ್ಟಿ

# ಉತ್ತಿಷ್ಠತ ಜಾಗೃತ !

೧

ಏಳಿರೆಚ್ಚರಗೊಳಿರಿ ! ಭರತ ಪುತ್ರರಿ ಬೇಗ,
ಜಾಡ್ಯ ದುಸ್ವಪ್ನಗಳ ತೆರೆಯು ಸರಿದಿಹುದು;
ಎಚ್ಚತ್ತು ಕಣ್ಣಾಲಿ ಬಿಚ್ಚುತ್ತ ನೋಡೀಗ
ಎಲ್ಲೆಲ್ಲು ಜಾಗೃತಿಯ ಬೆಳಕು ಹರಿದಿಹುದು.

೨

ಸುತ್ತಲೂ ಜಗವೆಲ್ಲ ಮಿಗವಕ್ಕಿಮರವೆಲ್ಲ
ಎಚ್ಚರಿನೊಳೆಚ್ಚತ್ತು ಕೂಗಿಡುತಲಿಹವು;
ಪಾಷಾಣ ಪಶು ಹೃದಯವನೆ ಕಹಳೆ ಕೆರಳಿಸಿದೆ
ವೀರರವ ಹೊರಹೊಮ್ಮಿ ಮಾರ್ದನಿಸುತಿಹವು

೩

ಬಿಡೆ ಬಿಡೆವು– ಎಂದೆಂದು ನಮ್ಮದೀ ಸೊತ್ತೆಂದು
ಕಾದಾಡಿ ತಾಯ್ನಾಡ ಕೀರ್ತಿಯುಳಿಸುವೆವು;
ಸತ್ಯ ಸಾಧನೆಗಾಗಿ ಮಣ್ಣೊಡಲು ಬಿಡಲಾಗಿ
ನಿತ್ಯ ಶುಭ್ರ ಯಶಶ್ಶರೀರ ಗಳಿಸುವೆವು.

೪

ಘೋರ ಗರ್ಜನೆಯಿರಲಿ, ದಾನವಾರ್ಭಟವಿರಲಿ,
ಮಾರಿ ನೃತ್ಯವೆ ಮುಂದು ಗುಡುಗುಡಿಸಿ ನಿಂದಿರಲಿ,
ಮಂಗಲೋತ್ಸವದಂದು ಸಂಗೀತ ಸ್ವರವೆಂದು
ಅದನಾಲಿಸುತ ನುಗ್ಗಿ ನುಗ್ಗುವೆವು ಮುಂದು.

೫

ಮುಂದು ಮುನ್ನುಗ್ಗುತಲಿ ಹೆಮ್ಮೆಯಿಂ ಹಿಗ್ಗುತಲಿ
ಸರ್ವಸತ್ವದಿ ರಣದ ಭೇರಿ ಹೊಡೆಯುವೆವು;
ಕೆಚ್ಚೆದೆಯ ಕಟ್ಟಾಳುತನದಿ ಬೆಳಗಲಿ ಬಾಳು
ಸ್ವಾತಂತ್ರ್ಯ ಸ್ವಾವಲಂಬನದಿ ನಡೆಯುವೆವು.

೬

ಸ್ವರ್ಗಸೋಪಾನದಲಿ ಸ್ವಾತಂತ್ರ್ಯವೀರರನು
ಸ್ವಾಗತೀಕರಿಸುತಿಹರದೊ ಮುಂದು ಮುಂದು !
ಮಾತೃಭೂಮಿಯ ಸೇವೆಯಲಿ ಮಡಿದ ವೀರರಿಗೆ
ಸ್ವರ್ಗ ಸರ್ಗಗಳಿಹವು ಕಾಲಡಿಗೆ ಬಂದು.

೭

ವಿಶ್ರಾಂತಿ ವಿಜಯದಲಿ, ಕ್ರಾಂತಿಕಿಡಿ ಮಿಂಚಿರಲಿ !
ಬಿಸಿರಕುತ ರೋಮರಂಧ್ರದಲಿ ಚಿಮ್ಮಿರಲಿ !
ಭವ್ಯ ಭಾರತಮಾತೆ ಎಚ್ಚೆತ್ತ ಮಕ್ಕಳಲಿ
ವರದಹಸ್ತವನೆತ್ತಿ ಹರಸಿ ನಿಂದಿರಲಿ !

೮

ತಾಯಸೇವೆಯೊಳೆಮ್ಮ ತನುವು ತೃಣವಾಗಿರಲಿ,
ಯಜ್ಞಕುಂಡದೊಳಿಂದೆ ಆಹುತಿಗೆ ಸಲಲಿ !
ಧಗಧಗಿಸಲೀದೇಹ ! ಸತ್ಯ ಸಂತೋಷದಲಿ
ಅರ್ಪಿಸುವೆವಿದೊ ನಿನ್ನ ಪಾದಪದ್ಮದಲಿ !

—ಕಯ್ಯಾರ ಕಿಞ್ಞಣ್ಣ ರೈ

# ನಾವು ಗೆಲುವೆವು

ಸೊಲ್ಲುಸಲ್ಲದು ಸೋಲು–ನಮ್ಮ ಮುಂದೆ;
ಗೆಲ್ಲ ಬಾಳ್ವೆಯ ಬೆಳಕು–ಗೆಲುವೆವೆಂದೆ.

೧

ಬಲವೊಂದೆ ಗೆಲವೆಂದೆ ನಂಬಲಿಲ್ಲ,
ಬಲ ದೇಹಬಲವಲ್ಲ–ಧೈರ್ಯವೆಲ್ಲ !
ಒಬ್ಬನಿದ್ದರುಸಿಂತ ನೆಲ ನೆರವಿದೆ;
ನಾವು ಗೆಲುವವರೆಂಬೆದೆಯ ಸ್ವರವಿದೆ !

೨

ಕಜ್ಜ ಕೈಗೂಡದಿರೆ ಕುಗ್ಗದಿಹುದು,
ಮುಂದಿದೆ ಮಹೋನ್ನತಿಯು– ನುಗ್ಗಬಹುದು;
ಕಯ್ಪರಸ ಕುಡಿ ಕುಡಿದರೆದೆಗುಂದೆವು,
ಸಪ್ಪೆಬಾಳುವೆ ಬೇಡ– ಸೋಲೊಲ್ಲೆವು.

೩

ಮಲೆವಮಲೆಗಳ ಮಧ್ಯೆ ಮನೆಯ ಕಟ್ಟಿ,
ಕಾಡಾನೆಗಳ ಹಿಡಿದು ಬೆನ್ನು ತಟ್ಟಿ,
ಹೆಬ್ಬಾವು ಹುಲಿ ಹೊಟ್ಟೆ ಸೀಳಿದವರು,
ನಮ್ಮ ಹಿರಿಯರು ಬಲಿತು ಬಾಳಿದವರು.

೪

ಸರಿದಾರಿ ತೊಲಗದೆಯೆ ಹಾದಿ ಹಿಡಿದ,
ತಲೆಯನ್ನು ತಗ್ಗಿಸದೆ ನುಗ್ಗಿ ನಡೆದ,
ಅದೆ ಪರಂಪರೆ ನಮಗೆ– ಸಾಕ್ಷಿಯವರು !
ನಾವು ಗೆಲುವೆವು ಸೋಲವರಿಯದವರು !

೫

ನಾವು ಗೆಲುವೆವು ಗರ್ವ ದುರ್ಗಗಳನು
ನಾವು ಹಿಡಿವೆವು ದರ್ಪ ಸರ್ಪಗಳನು,
ನಾವು ಮುರಿವೆವು ಮದದ ದಾಡೆಗಳನು
ನಾವು ಗೆಲುವೆವು ಜನರ ಹೃದಯಗಳನು !

೬

ಹಿಮ ಮಹಿಮ ಗಿರಿಶಿಖರವೇರಿ ನಡೆದು,
ಕಡಲೊಡಲ ನೊರೆ ತೆರೆಯ ಮೇಲೆ ಕುಣಿದು,
ಬಯಲಿನ ವಿಶಾಲದಲಿ ಆಡುತಿಹೆವು,
ನಾವು ಗೆಲುವೆವು– ಹಿಗ್ಗಿ ಹಾಡುತಿಹೆವು !

೭

ನಾವು ಗೆಲುವುದು ತಾಯಿನಾಡ ಗೆಲವು,
ನಾವು ಸೋತರೆ ತಾಯಿಗಶ್ರುಜಲವು !
ಜಯತು ಭುವನೇಶ್ವರೀ ನಾವ್ ಸೋಲೆವು !
ಜಯ ನಿನಗೆ ಜಯ ನಮಗೆ ಜಯವೆಂಬೆವು !

— ಕಯ್ಯಾರ ಕಿಞ್ಞಣ್ಣ ರೈ

# ಭಾರತಾಂಬೆಯ ಕೂಗು

೧

ಭಾರತಾಂಬೆಯು ನಾನು । ಕೊರಗೂತ ಕೂಗುವೆ ।
ಯಾರಿಲ್ಲವೇನು ಈ ಭೀಕರ- ರಕ್ಕಸರ
ಕ್ರೂರ ದವಡೆಯಿಂದ ಬಿಡಿಸಲು ॥

೨

ಏಳಿರಿ ಮಕ್ಕಳಿರಾ । ಗೋಳು ಬಹಳೆನ್ನದು ।
ಕೇಳಿರಿ ಕಿವಿಗೊಟ್ಟು ಆಲಾಪ- ಚೀನಿಯರು
ದಾಳಿ ತಂದಿರುವರು ಎನ ಮೇಲೆ ॥

೩

ಎನ್ನ ಹಿರಿಯ ಮಗ । ತನ್ನದೆಲ್ಲವನರ್ಪಿಸಿ ।
ಉನ್ನತ ಶಾಂತಿಯ ಬಾವುಟ- ಹಿಡಿದೆತ್ತಿ
ಬನ್ನಿರೆಂದು ಕರೆವನು ಜಗಕೆಲ್ಲ ॥

೪

ಬಡತನದ ಬವಣೆಯ । ಬಿಡಿಸಬೇಕೆಂದವನು ।
ಬಡಿದಾಡುವನು ಹಗಲಿರುಳು- ಮುಪ್ಪ
ಒಡಲಿನ ಕಡೆಗೆ ಗಮನಿಸದೆ ॥

೫

ಇಂಥ ಸಮಯದಲ್ಲಿ । ಎಂಥ ವಿಪತ್ತು ಬಂತು ।
ಹಂತೀಲಿ ಇದ್ದದ್ದು ರಕ್ಷಣೆಗೆ- ತಾ ಕೊಟ್ಟು
ಚಿಂತಿಸತೊಡಗಿದ ಎನ ಮಗ ॥

೭

ಶರಣೆನ್ನುವ ಕೈಗಳ । ಮುರಿಬೇಕೆ ಚೀನಿಯರು ।
ಮರವೆಯ ಮುಸುಕ್ಹಾಕಿ– ಮೋಸದಿ
ಅರೆದರೆದು ನುಂಗ ಬಯಸಿಹರು ॥

೭

ಶಾಂತಿದೂತನಾಗಿ । ಹಂತೀಲಿ ಕರೆದರೆ ।
ಭ್ರಾಂತಿಗೊಳಿಸಿದರು ಭಾರತದ– ಸುಲಿಗೆಯ
ಸಂತೆಗೆ ಬಂದು ಮಾಡಿದರು ॥

೮

ಗೆಳೆಯರೆಂದು ಬಂದು । ಒಳಸಂಚು ಮಾಡಿದಿರಿ ।
ಕೇಳುತನಕೆ ನೀವು ಮೇಲಾದಿರಿ– ಹಳದಿಯರೆ
ಮುಳುಗದು ಬೆಳ್ಳಿಯ ಚಿಕ್ಕೆಯು ॥

೯

ಒಳ್ಳೆತನಕೆ ಜಗದಿ । ಎಳ್ಳಷ್ಟು ಸ್ಥಳವಿಲ್ಲ ।
ಕಳ್ಳರ ಜಾತರಿ ಜಗದೊಳು– ಅರಿಯಿರಿ
ಅಳ್ಳೆದೆಯವರಿಗೆ ಗೆಲುವಿಲ್ಲ ॥

೧೦

ರಣರಂಗದ ತಾಣದಲಿ । ಪ್ರಾಣವನೆ ಪಣಕ್ಹಚ್ಚಿ ।
ಎಣಿಸದೆ ಕಾದುವಿರಿ ನನ್ನ– ಸಾವಿರಾರು
ಪುಣ್ಯಗರ್ಭದ ಮಕ್ಕಳಿವರು ॥

೧೧

ತಾಯಿಯ ಮೇಲಿರುವ । ಮಾಯದ ಅತಿರೇಕ ।
ಕಾಯವೆ ಅರ್ಪಿತವೆಂದಿರಿ– ರಣದಿ
ಸಾಯುವ ಗೆಲುವನು ಸಾರಿದಿರಿ ॥

೧೨

ಮಂಜೀನ ಗಿರಿಗಳು । ನಂಜು ಆದವು ಇಂದು ।
ಸಂಜೆ ಮುಂಜಾವು ಮೂರ್ಹೊತ್ತು- ಹರಿವುದು
ಮಂಜೀನಗೂಡ ನೆತ್ತರವು ॥

೧೩

ಧವಲ ಈ ಗಿರಿ ಮೇಲೆ । ಶವಗಳ ರಾಶಿಯನೆ ।
ನೆವರಿ ನಾನು ಹೊಟ್ಟೆಗೆ ಹಿಡಿದೆ- ಅಯ್ಯೋ
ಯಾವ ಒಡಲಿನ ಮಕ್ಕಳಿವರು ॥

೧೪

ಎನ್ನ ಮಕ್ಕಳಾದರೇನು । ಇನ್ನಾರಿದ್ದರೇನು ।
ಅನ್ಯಾಯವಾಗಿ ಮಡಿಬೇಕೆ- ದುಷ್ಟ
ಕುನ್ನಿಯ ಕೈಗಳ ತುತ್ತಾಗಿ ॥

೧೫

ಶಾಂತಿ ಪತಾಕೆಯ । ಹಂತವ ಮೆರೆಸಲು ।
ಶಾಂತಿ ದೂತಿಯರೆ ನೀವು ಬನ್ನಿ- ನಿಮ್ಮ
ಶಾಂತಿ ಸ್ಮರಣೆ ಜಗಕೆ ಸಾರಲು ॥

೧೬

ಪಂಚಶೀಲದ ತತ್ವ । ಮಿಂಚೀನ ವೇಗದಲಿ ।
ಸಂಚರಿಸಲೆಂದು ಜಗದೊಳು- ಸಾರಿರಿ
ಸಂಚಿತ ‘ ವಿಜಯ ದುಂದುಭಿ ’ ಯ ॥

— ಜಯದೇವಿತಾಯಿ ಲಿಗಾಡೆ

# ಜಯ ನಮ್ಮದು ಕೊನೆಗೆ !

ಜಯ ನಮ್ಮದು ! ಜಯ ನಮ್ಮದು !
ಜಯ ನಮ್ಮದು ಕೊನೆಗೆ;
ಜಯ ಶ್ರದ್ಧೆಯೆ ಘನವಜ್ರದ
ಕವಚವು ನಮ್ಮೆದೆಗೆ.

ಮೊದಲಡಸಿದ ಸೋಲಂತಿವು
ವಿಜಯಕೆ ಸೋಪಾನ;
ಎದುರಾದುದನೆದುರಿಸುವುದೆ
ಜಯಶಕ್ತಿಯ ಬಾಣ !

ಭಾರತ ಮರ್ಯಾದೆಗೆ ಚ್ಯುತಿ
ಚೀಣರ ಆಕ್ರಮಣ;
ವಿಶ್ವ ಪ್ರಜಾಪ್ರಭುತತ್ತ್ವಕೆ
ನೋಡಿದು ಆಹ್ವಾನ !

ಅಳಿಯಾಸೆಗೆ ಮನಗೊಡದುದೆ
ಲೋಕಕೆ ನಿಜಶಾಂತಿ;
ತನ್ನಿಂದಲೆ ತನ್ನೇಳಿಗೆ—
ಇದು ಭಾರತ ನೀತಿ !

ನಿರುಪದ್ರವಿಗಳ ತಿವಿಯುತ
ಕಾಲ್ ಕೆದರುವ ರೀತಿ
ಪರಸೀಮೆಯ ಅಪಹರಿಸುವ
ಚೀಣಾಸುರ ನೀತಿ !

ಘೋರಾಗ್ನಿಯ ಘಟಸರ್ಪವು
ಉರಿ ನಾಲಗೆ ಚಾಚಿ,
ಭಾರತ ಶಿರ–ಹಿಮಗಿರಿಯನು
ಕಬಳಿಸಲಿದೆ ಬಾಚಿ !

ಗಂಡಾಂತರ ಡಂಗುರಿಸಿದೆ
ದೇಶದ ದಶದಿಶೆಗೆ;
ತಾಂಡವಿಸಲಿ ರಣಸಾಹಸ
ರಿಪುದಳ ಮರ್ದನಕೆ

ಎಲ್ಲೆಲ್ಲಿಯು ಪುಟಪುಟಿಯಲಿ
ತ್ಯಾಗದ ಕಾರಂಜಿ !
ಸಲೆ ಬೆಳಗಲಿ ರಾಷ್ಟ್ರದ ಅಭಿ
ಮಾನದ ಅಪರಂಜಿ !

ಬೆಳೆಯೊಂದಕೆ ನೂರಾಗಲಿ
ನೂರಗಣಿತವಾಗಿ–
ಅಕ್ಷಯವಾಗಲಿ ಅನ್ನವು
ದುಡಿ ನೇಗಿಲಯೋಗಿ !

ಬೇಕಿನ ಬಕದೊಡಲೊಡೆಯಲಿ
ಜೀವನ ಸಾಮಗ್ರಿ;
ಸಾಕಿನ ಸಂಗೀತವ ನುಡಿ—
ಸಲು ದುಡಿ ಉದ್ಯೋಗಿ !

ಮಿತ ಬಳಕೆಯ ಉಳಿಗಾಸಿನ
ಚಿಂತಾಮಣಿ ಯಂತ್ರ
ಪ್ರತಿ ರಟ್ಟೆಗೆ ಕಟ್ಟಿರಲದು
ಸಂಪತ್ತಿನ ಸೂತ್ರ !

ಇರುವಿಕೆಯನೆ ಮುಡುಪಿಡುವುದು
ಭಾರತ ರಕ್ಷಣೆಗೆ;
ಚಿರ ಜಾಗೃತಿ ನಿಜ ಮೌಲ್ಯವು
ಸ್ವಾತಂತ್ರ್ಯದ ಸುಧೆಗೆ !

ದುರ್ಮೋಸದೊಳಾಕ್ರಮಿಸಿದ
ಚೀಣರ ಸದೆಬಡಿಯೆ
ಧುಮ್ಮಿಕ್ಕಲಿ ಭಾರತೀಯರ
ಸಿಡಿಲಾಳಿನ ಪಡೆಯೆ

ಸಿಡಿಗುಂಡಿನ ಸುಡು ಗುಗ್ಗರಿ
ತನಿಗೆಂಡದ ರೊಟ್ಟಿ
ಬಡಿಸಲು ತಿನ್ನುತ ಸೈನಿಕ
ಪಡೆವನು ರಣಪುಷ್ಟಿ !

ಮಾಸತಿಯರ ಕಲ್ ಬಸಿರಿನ
ಮಿಂಚಿನ ತರವಾರಿ
ಹಿರಿದೆಳೆಯುತ ಚೀಣರ ಪಡೆ
ವಧೆಗೈದೊಗೆ ತೂರಿ !

ಶಾಸನ ಶಿಲೆ ಹಾಡುತಲಿಹ
ವೀರರ ಕಥೆ ಕೇಳಿ.
ವೈದುಂಬುತ ತೊತ್ತಳದುಳಿ
ರಿಪುವಪುಗಳ ಸೀಳಿ !

ಅಡಿ ಮುಂದಿಡೆ ಸ್ವರ್ಗದ ಸಿರಿ
ಮರಣವೆ ಮಾನವಮಿ !
ನಡೆ ಮುಂದಕೆ ರಿಪು ದಮನಕೆ
ಒಲಿವಳು ಜಯಲಕ್ಷ್ಮಿ !

— ಗಂಗಪ್ಪ ವಾಲಿ

# ಚೈನೀ ಪುರಾಣ

ಹಿಮಾಲಯದಾಚೆ ಹಿಮದರಣ್ಯವ ದಾಟಿ
ಹಬ್ಬಿಹುದು ಶುಂಭ–ನಿಶುಂಭರ ಗೌರವ.
ನಾಕವನೆ ಜಯಿಸಿ ಮಾಡಿದರಿವರು ನರಕವನು,–
ಅಹುದು: ರವರವ ನರಕ! ಓ ಶಿವ ಶಿವ!
ಜನವೆಲ್ಲ ಗಾಣಪಶುವಾಗಿ ಗೋಳಾಡುತಿದೆ,
ಬರಿಯ ಕವಲೆತ್ತಾಗಿ ತಲೆದೂಗಿದೆ.
ಸಾಮ್ರಾಜ್ಯದನಲನಿಗೆ ಉರವಲಾಗುತ ಜ್ವಲಿಸಿ
ಹೊಂಬೂದಿಯಾಗಿ ಜನ್ಮವ ನೀಗಿದೆ.

ಕೈಲಾಸವನ್ನೇರಿ ಪಾರ್ವತಿಯ ಮೊರೆಹೊಕ್ಕು
ಸುರಗಣವು ಪ್ರಾರ್ಥಿಸಿದೆ ತೀರ ನೊಂದು :
"ಕೈಬಿಟ್ಟಿತೆಮ್ಮ ಗಡಿ. ಕೈಲಾಸವೆಮ್ಮ ಮುಡಿ.
ಅದಕೆ ಕೈ ಹಾಕುತಿಹನೀಗ ಶುಂಭ.
ಕರುಣಿಸೌ! ಹೂಡಲಿಹ ರುದ್ರ ನಾಟಕಕೆ ಇದು
ಓ ತಾಯಿ! ಬರಿ ನಾಂದಿ, ವಿಪ್ರಲಂಭ."

ಶಾಂಭವಿ ಪ್ರಸನ್ನಳಾದಳು ಮಣಿದ ಸುರಗಣಕೆ.
ಅಭಯವಿತ್ತಳು: "ಭೋ! ಸಿದ್ಧರಾಗಿ!
ಅಮೃತಪಾನಕೆ ಲುಬ್ಧರಾದ ನಿರ್ಜರರೆಲ್ಲ
ಸಮರಾಂಗಣದ ಹೊಣೆಗೆ ಬದ್ಧರಾಗಿ!"
ಸೌಂದರವೆ ಸಾಕಾರವಾದಂತೆ ಪಾರ್ವತಿಯು
ಓರ್ವ ಆರಣ್ಯಕೆಯ ರೂಪ ತಳೆದು
ಗೆಲಿದು ಕುಲು ಕುಲು ನಕ್ಕು ಗಿರಿ–ಗಂಹ್ವರವ ಹೊಕ್ಕು
ಕಂಗೊಳಿಸಿದಳು ಅಸುರಗಣವೆದುರು ಸುಳಿದು.

ರಾಜದೂತನು ಬಂದ. ಶುಂಭನೌತಣ ತಂದ.
ಔನ್ನತ್ಯದ ದೌತ್ಯ ! ಕಳಿಸಿದನವಮಾತ್ಯ.
"ಮೋಹಿಸಿದ ನಮ್ಮೊಡೆಯ ನೀನವನ ರಾಣಿಯಿರು.
ನಿನ್ನ ನಾಡವನದಿದೆ." ನುಡಿದ ಭೃತ್ಯ.
ತರುಣಿಯೆಂದಳು : "ಸಮರದಲಿ ಸೋಲಿಸಿದ ಗಂಡು
ಗಂಡುಗಲಿ. ಅವನನ್ನೆ ನಾನು ವರಿಸುವೆನು.
ಛಲದ ಸಾಧನೆಯ ಪರ್ಯಂತ ನಾನು ಕುಮಾರಿ.
ಸಮಾನಧರ್ಮಿಗೆ ಮಾಲೆ ಹಿಡಿದು ಅರಸುವೆನು."

ನಿಶುಂಭ ಕಳಿಸಿದ ಚಂಡ-ಮುಂಡರು
ತರುಣಿಯ ನೋಡುತ ಮರಳಿದರು.
ಹೆಣ್ಣಿನೊಡನೆ ಕಾಳಗ ಕೋಡು ಬಳೆ !
ಎಂದೆನ್ನುತ ಬಲು ಕೆರಳಿದರು.
ಶುದ್ಧ ಹುಂಬರೀ ಚಂಡ–ಮುಂಡರು,
ಶುಂಭ–ನಿಶುಂಭರ ಸೇವಕರು.
ಅಮಾನುಷ ಅನ್ಯಾಯ, ಅವಿದ್ಯೆಯ
ಪರಿಪೋಷಕರು, ಸಹಾಯಕರು !
ಧೂಮ್ರಲೋಚನರ ಧಾಂಡಿಗರಿವರು,
ರಕ್ತಬೀಜದಾ ರಾವುತರು.
ಶಾಂಭವಿ ಏರಿದ ಸಿಂಹವು ಸೀಳುವ
ಕರಿಗಿವರೇ ಹಿರಿ ಮಾವುತರು.

ಬಂದಿತು ಸೈನ್ಯ, ಬಂದನು ಶುಂಭ,
ಒಗೆ ಆ ಅಮೃತದ ಕುಂಭ !
ನಿಲ್ಲಿಸು ವಿಜಯಸ್ತಂಭ !
ತರುಣಿ ಮತ್ತೆ ಶಾಂಭವಿಯಾದೊಡನೆ
ಧರಣಿ ನಡುಗೀತು ಗಡಗಡನೆ !
ಹಣೆಗಣ್ಣನು ತೆರೆ ಓ ಮೃಡನೆ !

ತರುಣಿಯಾದ ಮಾದೇವಿ ಅದೇಕೊ
ತಾರಳು ಮತ್ತಾ ಶಾಂಭವಿ ರೂಪ ?
ಅವಳವತಾರಕೆ ಬಾಧಕವಾಗಿ
ನಿಂತಿದೆ ಯಾ ಒಡನಾಡಿಯ ಪಾಪ ?
ಸುರಗಣದುದ್ಧಾರಕೆ ಮುಳುವಾಗಿ
ನಂದದ ಯಾ ತವಸಿಯ ಶಾಪ ?

ಓ ! ಆಕ್ರೋಶಕೆ ಬೆದರಿ ಬರಲಿ ಕಣ್ಣು.
ಇಲ್ಲದಿರಲೆಮ್ಮ ಪಾಲಿಗೆ ಬರಿ ಮಣ್ಣು.
ಓ ವರ್ತಕನೆ !
ಲಕ್ಷ್ಮಿಯ ದ್ವಾರದಿ ಕುಂಟ ನೆವ ಹೇಳಿ
ಕುಣಿದೊಲು ನಟಿಸುವ ವರ್ತಕನೆ !
ಓ ಅಧಿಕಾರಿ !
ಜೇಬುಗಳ್ಳರಿಗೆ ಪರಮಗುರುವಾಗಿ
ಗುರುಗುರುಗುಟ್ಟುವ ಗಿಟ್ಟುವ ದುರಹಂಕಾರಿ !
ಓ ಮಂತ್ರಿ !
ಚುನಾವಣೆಯ ಅಮಲುಬಜಾವಣೆಯೊಂದು
ನೂರು ನಾಲಗೆಯುಳ್ಳ ಗಲಗುಲೇಖನಿಯೊಂದು.
ನಾಡು ಹಾಳಾದರೇನು ?
ಬಾಳು ಗೋಳಾದರೇನು ?
ಚುನಾಯಿಸಿ ನಿನ್ನ ಪಟ್ಟವಣೆ ಭದ್ರವಿರೆ
ಎಲ್ಲವೂ ಕ್ಷೇಮವೆಂಬಂತೆ ಕಣ್ಬಿಡುತಿರುತ
ಆಗದಿರು ಕುತಂತ್ರಿ !
ಓ ಸಂಬಳದವನೆ !
ರೇಲ್ವೆಯಲಿ, ಕಾರಖಾನೆ, ಬಟ್ಟೆಗಿರಣಿಯಲಿ
ಶಾಲೆ–ಕಚೇರಿಯಲಿ, ಫಿರ್ಕೆಗಳ ಡೇರೆಯಲಿ
ಮಾಸ-ಮಾಸಕೆ ನಿನ್ನ ವರ್ಷಾಸನವ ತಿಂದು
ಕರ್ತವ್ಯಚ್ಯುತಗೆ ದರ್ಪವೆ ಕಜ್ಜವೆಂಬಂತೆ

ಇಹ ನಿರಂಬಳದವನೆ !
ಓ ! ರಾಜಕಾರಣಿ ! ಓ ! ಸರಪಂಚ !
ಸಾಕಾಗಿಲ್ಲವೆ ನಿಮಗಿನ್ನೂ ಲಂಚ ?
ನೀವಿಟ್ಟಿಹ ಒಂದೊಂದು ತಪ್ಪು ಹೆಜ್ಜೆ
ತಾಯಿಗೆ ತಲೆಭಾರವು, ಒಜ್ಜೆ.
ದೇವಮುಹೂರ್ತವು ಸಮಿಪಿಸಿತು ಓ
ಓ ಶತಮೂರ್ಖರೆ ! ಎದ್ದೇಳಿ !
ಹಗಲು ದರೋಡೆಯು ಬಂತು ಬಾಗಿಲಿಗೆ
ಊದುತಿಹುದು ರಣಗಾಳಿ.
ತಿದ್ದಿಕೊಳದಿರಲು ರಣಭೈರವಿಗೆ
ನೀವ್ ಮೊದಲನೆ ತುತ್ತು.
ಮೆಟ್ಟುತ ನಿಮ್ಮನು ಶಾಂಭವಿ ಹಚ್ಚುವಳು
ಶುಂಭ–ನಿಶುಂಭರ ಗೊತ್ತು.
ಇದಕಾದರು ಎದ್ದೇಳಿ !
ಉಘೋ ! ಉಘೋ ! ಎನ್ನುತ ಬಾಳಿ !
ಮಹಾಜನ ಓ
ಏಳಿ !

ಶುದ್ಧ ಹುಂಬರೀ ಚಂಡ–ಮುಂಡರು,
ಶುಂಭ–ನಿಶುಂಭರ ಸೇವಕರು.
ಅಮಾನುಷ ಅನ್ಯಾಯ, ಅವಿದ್ಯೆಯ
ಪರಿಪೋಷಕರು, ಸಹಾಯಕರು !
ಧೂಮ್ರಲೋಚನರ ಧಾಂಡಿಗರಿವರು,
ರಕ್ತಬೀಜರಾ ರಾವುತರು.
ಶಾಂಭವಿ ಏರಿದ ಸಿಂಹವು ಸೀಳುವ
ಕರಿಗಿವರೇ ಹಿರಿ ಮಾವುತರು.

—ವಿನಾಯಕ

# ಭಾರತ ವೈಜಯಂತಿ

ಗರುಡನಂತೆ ಗರಿಗೆದರಿ ಹಾರಿತು ಹಾರಿತ್ತು
ಭಾರತದೀ ವೈಜಯಂತಿ ರೋದೋಂತವ ಸೇರಿ ‖ ಪ ‖

ಕಲು ನೆಲ ಜಲ ಗಿರಿ ಕಾನನ
ಪಡೆದಿರೆ ರೋಮಾಂಚನ
ಗ್ರಹ ತಾರೆ ಸಮ್ಮೇಳದಿ
ಬಾನಯಾನಮಾಡಿ ಹಾರಿತ್ತು ‖ ಅ. ಪ. ‖

ಮುನ್ನೀರಿನ ವಲಯವೇಳು– ಕಳಿಸಿವೆ ಮುತ್ತಾಳ ಮಾಲೆ
ಎದೆಯಾಳದ ಕೆಳೆಬಾಳಿನ– ಸಂದೇಶವ ಸಾರಿ
ನಾಡ ನಾಡ ಸಸ್ಕೃತ್ರಿ– ಬೆಸೆಯುವುದೇ ಶುಭಕೀರ್ತಿ
ಭಾರತದೀ ಧಾತ್ರಿಗೆಂದು– ದಿಸೆ ದಿಸೆಗೂ ಸಾರಿ
ರೆಕ್ಕೆಯೊಂದನಿಸಿಸು ತೆರೆಯೆ– ಮುತ್ತು ರತ್ನವೆರಚಿತ್ತು
ಇನಿಸು ಬೀರೆತ್ತಲೊಲೆಯೆ– ಅನ್ನ ವಸನ ಸುರಿದಿತ್ತು
ಮೂಲೋಕವು ತವರು ನೆಲಸು– ಎಲ್ಲೆಲ್ಲಿಯು ನಂಟು
ಯಾರಿಗೇನು ಬೇಸರಿಡದ– ಸೌಖ್ಯದವಿನ್ನಾರಿಗುಂಟು ?
ಕಣ್ಣಾಡಲು ಕಟ್ಟಿ ಸೇತು– ನಾಡ ನಾಡ ಸೇರಿಸಿತು
ಕಾಲುವೆ ಕೆರೆ ಕಟ್ಟಿ ಕಟ್ಟಿ ಲೋಕಕುಣಬಡಿಸಿತ್ತು
ಮನೆ ಮಠ ಗುಡಿ ಗೋಪುರ– ಚಿನ್ನ ಕಳಸವೆತ್ತಿತ್ತು
ಹಸುಮಕ್ಕಳ, ಕಲಿವೀರರ ಕಣ್ಕಾಂತಿಯು ಬೆಳಗಿತ್ತು
ಎಂದಲ್ಲಿಯೆ ಏನು ನಡೆದ– ರಲ್ಲಿ ನಿನತು ಕಣ್ಣು
ದುರ್ನಯವೋ ಆ ಕಣ್ಣಿಂದ– ಅಂಕೆಗೆ ತಾ ಬಂದಿತ್ತು.
ಲೋಕದ ಬಿರುಗಾಳಿಗೇರಿ– ಬಾನ್ ಕಳೆದು ತೋರಿ
ಮೂಡು, ಪಡು, ತೆಂಕು, ಬಡಗು– ಸಮ್ಮೋದವ ಬೀರಿ

ದಿಗ್ದಿಗಂತ ವಿಶ್ರಾಂತ– ಶಾಂತಿಯುದೀ ವೈಜಯಂತಿ
ತೇಲುತ್ತಿದೆ ಬಾನೊಳಾಡಿ– ಲೀಲಾಲಸಯಾನಿ

ಲೋಕಧಾತ್ರಿ, ನಿನ್ನ ಮೂರ್ತಿ
ನೀಲಾಕಾಶದಿ ನಟ್ಟು
ಧರ್ಮ ಧ್ರುವತಾರೆಯಾಯ್ತು
ಅಮೃತಕೆ ನೆಲಗಟ್ಟು

ಗರುಡನಂತೆ ಗರಿಗೆದರಿ– ಹಾರಿತು ಹಾರಿತ್ತು
ಭಾರತದೀ ವೈಜಯಂತಿ ರೋದೋಂತವ ಸೇರಿ
ಕಲು ನೆಲ ಜಲ ಗಿರಿ ಕಾನನ ಪಡೆದಿರೆ ರೋಮಾಂಚನ
ಗ್ರಹ ತಾರೆ ಸಮ್ಮೇಳದಿ ಬಾನಯಾನವಾಡಿ.

—ವಿ. ಸೀ.

# ತ್ಯಾಗದ ತುತ್ತೂರಿ

೧

ನಿನ್ನದೇನುಂಟು ?
ಎಲ್ಲ ರಾಷ್ಟ್ರದ ಗಂಟು ನಿನ್ನದೇನುಂಟು ?
ಈ ಪುಣ್ಯಭೂಮಿಯಲಿ ಬೆಳೆದ ಕಾಳು
ಅದನುಂಡು ಸೊಕ್ಕಿರುವ ಬಾಳು
ನಾನೆಂಬ ಪ್ರತ್ಯೇಕ ಭಾವನೆಯು ಹಾಳು
ಮನೆ ಮುರುಕತನ ಸಾಕು ಅವನಲ್ಲೆ ಹೂಳು !

ಯಾರಯ್ಯ ನೀನು ?
ಈ ಮಹಾಸಾಗರದ ಚಿಕ್ಕ ಮೀನು ?
ನಾನೆಂದು ಮೊಗವೆತ್ತಿ ನೋಡಿದರೆ ಸಾಕೆ ?
ಬಾನಡಿಯ ವಿಸ್ತಾರ ವಲಯದಲಿ ನೀನೊಬ್ಬ
ಯಾರಿಗೂ ಕಾಣದಿಹ ಸಣ್ಣ ಚುಕ್ಕೆ !

ಈ ವಿಶ್ವದಾಶ್ರಯದ ಹೆಮ್ಮರದ ನೆಳಲಿನಲಿ
ಬಾಯ್ದೆರೆದು ಮಲಗಿರುವ ಗೂಳಿ
ಮೇಲೆದ್ದು ಕಾಲ್ಗೆರೆದು ಗುಬುರಿಕ್ಕಿ ಗರ್ವದಲಿ
ಮರದೆಡೆಗೆ ತೊಡಗಿರುವ ದಾಳಿ !

ಯಾರ ಹಾಲನು ಕುಡಿದು ಚಪ್ಪರಿಸುತಿಹೆ ಬಾಯಿ
ಕೂಳನಿಕ್ಕಿದ ಕೈಯ ಮರೆಯದಿಪೆ ನಾಯಿ !
ಅದಕು ಕೀಳಾಯ್ತೆ
ಮಾನವನ ಬಾಳುವೆಯು ಸಂತೆ ?
ತಾಯ ನೆಮ್ಮದಿಗಾಗಿ ಕ್ಷಣ ಕಾಲವೂ ಚಿಂತೆ
ಮಾಡದಿಹ ಬರಡುತನವಂತೆ !

೨

ಮನೆಮಾರು ಬದುಕೆಲ್ಲ ಯಾರದಯ್ಯ ?
ಯಾರ ಮೈಮೇಲೆ ನಿನ್ನೆಲ್ಲ ಕರ್ಮವಕಲಸಿ
ಕೊಡಿಸಿದ ಬದುಕಿನಾದಾಯ ?
ದೇಶಕ್ಕೆ ದೇಶವೇ ಮೈ ಕೊಸರಿಕೊಂಡಾಗ
ನಿನಗೊಬ್ಬನಿಗೆ ಬಂತೆ ಈ ನಿರ್ಭಯ ?
ನಡೆಯುತಿದೆ ಭೂಮಿಯುಡಿಪಾಯ !

ಸತ್ತರು ಬಹುಕಾಲ ಮನೆ ಮಂದಿ ತಿನಲೆಂದು
ಟ್ರಸ್ಟುಗಳ ನಿರ್ಮಿಸಿದಪ್ರಮೇಯ
ಮತ್ತಷ್ಟು ಮಣಾ ಚಿನ್ನ ಮಣ್ಣಿನಡಿಯಲಿ ಹಾಕಿ
ಬಚ್ಚಿಟ್ಟು ಮುಚ್ಚಿಟ್ಟಿರುವ ಮಹದುಪಾಯ ?

ಆದರೂ ಚಿಂತಿಲ್ಲ— ಭಾರಿ ಸಭೆಯಲ್ಲಿ ಕಿರು
ಬೆರಳಿನುಂಗುರ ಕೊಟ್ಟ ಧರ್ಮರಾಯ !
ಇಲ್ಲಿಗಾಯಿತೆ ರಾಷ್ಟ್ರರಕ್ಷಣೆಯ ಹೋಮದಲಿ
ಎಲ್ಲವನು ನೀಡಲಿಹ ಚಿರಸಹಾಯ ?

ಮಾಕಾಳಿ ಕೆರಳಿ ಕೆನ್ನಾಲಿಗೆಯ ಹೊರಚಾಚಿ
ಒರಲಿ ಇನ್ನು ಬರಲಿ ಎನ್ನುತಿಹಳು
ಈ ಗುಟುಕು ತುತ್ತುಗಳು ಹಲ್ಲಿನೆಡೆಗೂ ಸಾಲ
ದೆಂಬ ಹೂಂಕಾರ ಮಾರ್ಮೊಳಗುತಿದೆ ಕೇಳು !

ಹತ್ತುತಲೆಯನು ಕಡಿದು ಕೊಟ್ಟ ರಾಮನಂತೆ
ಮತ್ತೆ ಕೈಲಾಸವನು ಜಯಿಸಬಹುದು.
ಒಂದಲ್ಲ ಎರಡಲ್ಲ ಎಲ್ಲವನು ತೆತ್ತಾಗ
ನಿನಗಾಗಿ ಕಾದಿಹಳು ಜಯಶ್ರೀವಧು !

೩

ನಿನ್ನದೇನುಂಟು ?
ಇಟ್ಟಿಹುದು ಕಾಣಿಕೆಯ ಹರಿವಾಣ

ತನುಮನಧನ– ಎಲ್ಲವೂ ರಾಷ್ಟ್ರಾರ್ಪಣ
ಒಕ್ಕಟ್ಟು ಒಮ್ಮನಪಿನವುರಗಾನ
ರಣಕಹಳೆಯಾಗಿರಲಿ– ತೊಡಗು ಬಲಿದಾನ

ಏನಿಲ್ಲವೆಂದರೂ ನಂಬುವರು ಬೇಕಲ್ಲ
ಉಡಲುಂಟು ತೊಡಲುಂಟು ಕೊಡಲಿಕ್ಕಿಲ್ಲ ?
ಕೊಡುವ ಕೈ ಹಿಂದಾಗಿ ಸೆಳೆವ ಕೈ ಬಂದಾಗ
ಕಾಲು ಜಾರೀತೆಂಬ ಮಾತು ಸುಳ್ಳಲ್ಲ

ಹೊದೆವ ಕಂಬಳಿಯೇನು– ತೊಡುವ ಚಪ್ಪಲಿಯೇನು
ಏನಿದ್ದರೂ ಸರಿಯೆ ಬರಲಿ ಬರಲಿ !
ಕೊಡುವ ಸೊತ್ತಿನ ದಾನ ವಿಶ್ವಮೂರ್ತಿಯ ಮುಂದೆ
ತಲೆಯೊಡ್ಡಿ ಕೈಮುಗಿದು ಕುಳಿತಿಹನು ಬಲಿ ।

ಏನಿಲ್ಲದಿದ್ದರೂ ಸ್ವಾತಂತ್ರ್ಯವೊಂದನೇ
ಬಿಗಿದಪ್ಪಿ ಬಡತನದಿ ಬದುಕುವ ಹಟ
ಏನಿದ್ದರೇನು ? ಸೌಭಾಗ್ಯ ಸೂತ್ರವು ಕಡಿದು
ಕಳೆಯಿತೆಂದರೆ ಮತ್ತೆ ಸಾವುದು ದಿಟ !

ನಿನ್ನದೇನುಂಟು ?
ನೋಡೋಣ ಇನ್ನೊಮ್ಮೆ ಹರಡು ?
ನಿನಗಾಗಿ ರಾಷ್ಟ್ರವಲ್ಲ
ರಾಷ್ಟ್ರಕ್ಕಾಗಿಯೆ ನಿನ್ನ ರಕ್ತ
ಮಳೆಯಾಗಿ ಸುರಿದಾಗ ಹೊಳೆಯಾಗಿ ಹರಿದಾಗ
ಕಳೆದೀತು ದೇಶದ ವಿಪತ್ತು
ಬೆಳೆದೀತು ಸರ್ವ ಸಂಪತ್ತು

— ಎಸ್. ವೆಂಕಟರಾಜ

# ಅಲ್ಲಿ ನಿಂತಿದೆ ಜಾಗ್ರತೆ

೧

ಹದ್ದು ಹಾರಿದೆ ಸರಹದ್ದಿನಲ್ಲಿ
ಸದ್ದು ಮಾಡದೆ ಕದ್ದು ನುಸುಳುವ
ಯುದ್ಧ ಮೋಹಕೆ ಪಂಚಶೀಲತೆ-
ಯನ್ನು ತಾನೆ ದುರ್ಬುದ್ಧಿಯಲಿ !

ಶುದ್ಧ ಹೃದಯದ ಸ್ನೇಹಹಸ್ತವ-
ನೊದ್ದು ಮುಸುಕಿನ ಹಿಂದೆ ಮುಸುಳುವ
ಬುದ್ಧಿವಂತಿಕೆಯಲ್ಲಿ ಬಾಳುವ
ಹದ್ದು ಹಾರಿದೆ ಸರಹದ್ದಿನಲಿ !

೨

ಸುತ್ತಮುತ್ತಲು ಕಣ್ಣು ಹೊರಳಿಸಿ
ನೋಡುತಿಹ ನರಿಯಣ್ಣ
ಹಸಿದ ಹೊಟ್ಟೆಗೆ ಕೂಳು ಕಾಣದೆ
ಕಾದಿರುವ ಕಾರ್ಪಣ್ಯದಲಿ
ಕಾಲ್ಗೆದರಿ ಕೂಗುವ ಚೈನ !

ಪಿತ್ತವೇರಿದ ಚಿತ್ತವೃತ್ತಿಗೆ
ಮತ್ತೆ ಸಮತಾವಾದ ಸವರಿದ
ಏನು ಬೆಡಗಿನ ಬಣ್ಣ !

ಎಲ್ಲ ಮಾತೂ ಎಲ್ಲ ನುಡಿಯೂ
ಎಲ್ಲ ಶಾಂತಿಯ ಸಾಂತ್ವನ
ಕಲ್ಲಮೇಲಕೆ ಸುರಿದ ನೀರಿನ
ಹಾಗೆ ಸರಿದಿದೆ ಸುಮ್ಮನೆ !

೩

ಜೋಲು ನಾಲಿಗೆ ಜೊಲ್ಲು ಸುರಿಸುತ
ಮನೆಗೆ ಬಂದಿತು ನಾಯಿ
ಲೋಕ ಶಾಂತಿಗೆ ನೆರವು ನೀಡಲು
ನಾನು ನಿಮ್ಮನುಯಾಯಿ

ಎಂದು ಹೇಳಿತು ಅಂದು ಬೊಗಳಿತು
ಹಿಂದಿ ಚೀನೀ ಭಾಯಿ
ಕಟ್ಟಕಡೆಯಲಿ ಗುರ್ರನೆಂದಿತು
ಹಲ್ಲ ಬಿಟ್ಟಿತು ಬಾಯಿ !

೪

ಕೊಳ್ಳಿ ಹಿಡಿಯಲು ತೋಳ ಬಂದಿದೆ
ಕವಿದ ಕತ್ತಲು ಮರೆಯಲಿ
ಕಳ್ಳಹೆಜ್ಜೆಯನಿಟ್ಟು ಮೆಲ್ಲನೆ
ನುಸುಳುತಿದೆ ಹಿಮಗಿರಿಯಲಿ !

ಬೆಟ್ಟ ತಪ್ಪಲನೆಲ್ಲ ಕಲಕಿದೆ
ರಕ್ತ ಮಾಂಸದ ಕಾಲುವೆ
ದುಷ್ಟ ಶಕ್ತಿಯ ದಮನ ನೀತಿಯ
ನಿಯಮಕೇನಿದೆ ಹೋಲುವೆ ?

ಹದ್ದು ನರಿಯೊ ನಾಯಿ ತೋಳವೊ
ಅಲ್ಲಿ ನಿಂತಿದೆ ಜಾಗ್ರತೆ !
ಎದ್ದು ಬನ್ನಿರಿ– ಒದ್ದು ಕಾಯಿರಿ
ನಮ್ಮ ಗಡಿಯ ಸಮಗ್ರತೆ !

— ಎಸ್. ವೆಂಕಟರಾಜ

# ಒಂದಾಯಿತು ಭಾರತ

ಹಿಮಾಲಯವನೊತ್ತಿ ಬರಲು
ಪೀತ ಭೂತ ಮಾರುತ,
ಒಂದಾಯಿತು ಭಾರತ.
ಹಿಂದೆಂದೂ ಇಲ್ಲದಂತೆ
ಒಂದಾಯಿತು ಭಾರತ.

ಉದುರಿ ಹೋಯ್ತು ನಮ್ಮೊಳಗೇ
ಬೆಳೆದು ನಿಂತ ಬಂಧನ
ನಾಡಿನ ನರನಾಡಿಯಲ್ಲಿ
ಆವೇಶದ ಸ್ಪಂದನ
ಹೃದಯವೆಲ್ಲ ಕೈ ಚಾಚಿತು
ಹಿಡಿದು ತನ್ನ ಕಾಣಿಕೆ
ಹಿಮಾಲಯವೆ ಬೆರಗಾಯಿತು
ಕಂಡ ಹೊಸತು ನೋಟಕೆ.

ಒಂದಾಯಿತು ಭಾರತ
ಹಿಂದೆಂದೂ ಇಲ್ಲದಂತೆ
ಒಂದಾಯಿತು ಭಾರತ:
ಮತ್ತೆ ಎಂದು ಮಲಗದಯ್ಯ
ಎದ್ದು ನಿಂತ ಚೇತನ.

ಇದು ನಮ್ಮದು ಈ ನೆಲ
ಇದು ನಮ್ಮದು ಈ ಜಲ
ಇದು ನಮ್ಮದು ಹೊಸ ಎಚ್ಚರ-
ಧರುಣೋದಯ ಜೀವನ

ಮತ್ತೆ ಮಬ್ಬು ಕವಿಯದಂತೆ
ಉಳಿಸಬೇಕು ಈ ಜನ.

ಒಂದಾಯಿತು ಭಾರತ
ಹಿಂದೆಂದೂ ಇಲ್ಲದಂತೆ
ಒಂದಾಯಿತು ಭಾರತ:

ಇಲ್ಲ, ಇನ್ನು ಸ್ಥಳವಿಲ್ಲವೊ
ಆಕ್ರಮಿಸುವ ಹೆಜ್ಜೆಗೆ;
ಸದಾ ತೆರೆದ ಬಾಗಿಲಿದೆ
ಸ್ನೇಹ ಪ್ರೀತಿ ಸಹನೆಗೆ.
ಮರೆ ಮೋಸಕೆ ಬೂಟಾಟಿಕೆ-
ಗಿಲ್ಲಿ ಇಲ್ಲ ನಿಲುಗಡೆ
ಅದನೆಲ್ಲಾ ಸಹಿಸಲೆಂದು
ಪಡೆಯಲಿಲ್ಲ ಬಿಡುಗಡೆ.
ಇದೋ ಈಗ ಒಂದಾಗಿದೆ
ಈ ಅಖಂಡ ಭಾರತ
ಈ ಎಚ್ಚರ ಉಳಿಯಲಯ್ಯ
ಒರೆಗಳಚಿದ ಖಡ್ಗದಂತೆ
ತುಕ್ಕಡರದೆ ಹೊಳೆಯುತ.

ಹಿಮಾಲಯವನೊತ್ತಿ ಬರಲು
ಪೀತ ಭೂತ ಮಾರುತ,
ಒಂದಾಯಿತು ಭಾರತ,
ಹಿಂದೆಂದೂ ಇಲ್ಲದಂತೆ
ಒಂದಾಯಿತು ಭಾರತ

— ಜಿ. ಎಸ್. ಶಿವರುದ್ರಪ್ಪ

# ಅಲ್ಲಿ—ಇಲ್ಲಿ

ರೇಡಿಯೋ ಮುಂದೆ ಕುಳಿತು ಕೇಳುತಲಿರುವೆ
ನಮ್ಮವರ ರಣ ವಿಕ್ರಮದ ವಾರ್ತೆಗಳನ್ನು :
ಹಕ್ಕಿ ರೆಕ್ಕೆಯ ನೆರಳಿಗೂ ನಿಲುಕದೆತ್ತರದ
ನಿಶ್ಶಬ್ದ ಶ್ವೇತಶಿಖರದ ಕೆಳಗೆ ಹಗಲಿರುಳು
ನಡೆಯುತಿದೆ ಯುದ್ಧ. ಹೆಪ್ಪುಗಟ್ಟಿಸುವ ಆ
ಛಳಿಯಲ್ಲಿ ಸಿಡಿಗುಂಡಿಗೆದೆಯೊಡ್ಡಿ ಸಾಗುತಿದೆ
ಭಾರತದ ಬಿಸಿ ರಕ್ತ. ನಾನಿಲ್ಲಿ ಬೆಚ್ಚನೆಯ
ಮನೆಯಲ್ಲಿ, ಉಂಡು, ಛಳಿಗೆ ರಗ್ಗನು ಹೊದೆದು
ಮಕ್ಕಳಾಡುವುದ ನೋಡುತ್ತ ಕುಳಿತಿರುವೆ.
ಓ ಇಲ್ಲಿ, ಬೆಚ್ಚಗೆ ಕುಳಿತ ನಮಗಾಗಿ, ನಮ್ಮ
ಮಕ್ಕಳಿಗಾಗಿ ಓ ಅಲ್ಲಿ ಹಿಮಶ್ವೇತ ಶಿಖರದಲಿ
ರಕ್ತ ಲಿಪಿಯನು ಬರೆದು ಗಡಿ ಕಾಯ್ವ ಸೋದರರೆ
ತುಡಿಯುತಿದೆ ಇದೋ ಈ ನನ್ನ ಸಿಡಿಗುಂಡಿನೆದೆ,
ನಿಮಗಾಗಿ ನಿಮ್ಮ ಸಾಹಸಕಾಗಿ ಕೃತಜ್ಞತೆಯ ವಂದನೆ.

— ಜಿ. ಎಸ್. ಶಿವರುದ್ರಪ್ಪ

# ಬಂತು ಯುದ್ಧ

ಹೊಸಿಲ ಬಳಿಗೇ ಬಂತು ಯುದ್ಧ, ಏಳಣ್ಣ ಏಳೋ
ಆಗು ಸನ್ನದ್ಧ.

ಬಿಟ್ಟಿ ಬಂದುದನು ಪಟ್ಟಾಗಿ ಹೊಡೆದು ಗುಟ್ಟಾಗಿ ಮಲಗಿದಂತಲ್ಲ,
ಇದು ಯುದ್ಧ;
ನೀನು ನಿನ್ನದು ಎಲ್ಲವನು ಝಡತಿ ಮಾಡಿಕೋ ಒಂದು ಸಲ,
ಆಗು ಸನ್ನದ್ಧ.

ಹಿಂದೆಲ್ಲ ಎಚ್ಚರಿಸಿದಾಗ ಕನವರಿಸಿ ಮಲಗಿದೆ:
'ಎಲ್ಲೋ ಇದೆ ಅದು ಆಚೆ, ಕಂಪೌಂಡಿನಾಚೆ.'
ಗೇಟನು ತಳ್ಳಿ ಒಳನುಗ್ಗಿದಾಗಲೂ ನಿನಗೆ ಕನಸು:
'ಇನ್ನೂ ಇದೆ ಅಂಗಳದಲ್ಲೆ, ಈಗೇಕೆ ಅದರ ಮಾತು ?'.
ಈಗಲೋ ಹೊಸಿಲಿಗೇ ಬಂತು ನೆಕ್ಕುವ ನಾಲಗೆ,
ತಡ ಮಾಡಿದರೆ ಮನೆಯೊಳಕ್ಕೇ ನುಗ್ಗೀತು ನೆಟ್ಟಗೆ

ಎಂದೆಂದು ಹೋರಾಡಿದವನಲ್ಲ ನೀನು, ಅಭ್ಯಾಸವಿಲ್ಲ ನಿನಗೆ;
ಕೇವಲ ಚರಿತ್ರೆಯಲ್ಲೋದಿ ಗೊತ್ತಿದೆ ನಿನಗೆ ಯುದ್ಧಗಳ ವರ್ಣನೆ.
ನನಗೆ ಗೊತ್ತಿಲ್ಲವೆ, ಯಾರೋ ಹಗಲಿರುಳು ಹೋರಾಡಿ
ಬೆವರನು ಸುರಿಸಿ ತಂದು ಕೊಟ್ಟರು ನಿನಗೆ ಯಜಮಾನಿಕೆ.
ಕೂತು ಉಂಡು, ಆಗಾಗ ಕಿತ್ತಾಡಿ ಟೋಪಿಯ ಕೆಳಗೆ ನಿದ್ದೆ ಹೊಡೆದವ ನೀನು,
ಗೊತ್ತಿರಲಿಲ್ಲ ನಿನಗೆ ನಿನ್ನ ಮನೆಯಾಚೆಗೇ ನಡೆದ ಹಳದಿಗಣ್ಣಿನ ಕಳ್ಳ
ಹೊಂಚಾಟಕೆ.

ಈಗ ಗೊತ್ತಾಯಿತೇ ಅಣ್ಣ ? ಏಳು, ಈಗ ನಿನ್ನದು ಸರದಿ,
ಗರ್ಜಿಸು, ಆಗು ಸನ್ನದ್ಧ
ನಿನ್ನ ಮನೆ ಬಾಗಿಲಲ್ಲೇ ಬಂದು ನಿಂತಿದೆ ಯುದ್ಧ.

ಕೊಡು ಬೀಳ್ಕೊಡಿಗೆಯ ಮುತ್ತ ನಿನ್ನ ಮನದನ್ನೆಯ ಕೆನ್ನೆಗೆ,
ಮಕ್ಕಳಿಗೆ ಪೆಪ್ಪರಮೆಂಟು ಕೊಡು, 'ಟಾ ಟಾ' ಹೇಳು.
ಹೆಗಲಿಗೇರಿಸು ಇದುವರೆಗು ಪೂಜೆಗಿರಿಸಿದ್ದ
ಹಳೆಯ ಬಂದೂಕನು.
ಕಹಳೆ ಊದು, ರಣಭೇರಿಯನು ಬಜಾಯಿಸು
ಮೂಲೆ ಮೂಲೆಗಳಲ್ಲಿ ಮುದುರಿ ಕೂತವರ ನೆಟ್ಟಗೆ ನಿಲಿಸು,
ಜಮಾಯಿಸು.

ಒಂದು ಸಲವಾದರೂ ಅನುಭವಿಸು, ಈ ಮಣ್ಣು
ನನ್ನದು, ನನಗೆ ಜೀವ ಕೊಟ್ಟದ್ದು ಎಂದು.
ಈ ಭಾವವಿಲ್ಲದ ಬದುಕೊಂದು ಬದುಕಲ್ಲ,
ಆದರಲ್ಲೆ ಸಾಯುವುದು ಪುಣ್ಯವೆಂದು.
ಏಳು, ಹೊಸಿಲ ಬಳಿಗೇ ಬಂತು ಯುದ್ಧ,
ನೀನಾಗು ಸಿದ್ಧ.

— ಜಿ. ಎಸ್. ಶಿವರುದ್ರಪ್ಪ

## ಕಾಳಗರೆ

೧

ಆಂಗ್ಲ ಸ್ತಂಭಗಳಿಂದ ಕಟ್ಟಿರುವ
ಆಡಳಿತದ ಮನೆಯು
ಕಿಟಕಿ ತೋರಿಸಿದ್ದಷ್ಟೆ ಸತ್ಯವೆಂ-
ದಾಡಿಕೊಂಡು ನೆರೆಯು
ಹಳದಿ ಮನೆಯು ನಂಬಿದೆವು ಅದರ ಮ-
ನ್ನಿಸಿದ ಆಂಗ್ಲರೀಗ
ರಣವಿಮಾನಗಳನತ್ತ ಮಾರುವರು
ನೆರವೆಮಗೀವಾಗ !

೨

ಕಾಗೆಗೆಲ್ಲಿ ಶುಚಿ ? ಜೂಜಿಗ ಕಟ್ಟುವ
ನನ್ನಿಗೆಷ್ಟು ದರವ ?
ಸರ್ಪದಲ್ಲಿ ಎಂದಾದರೂ ಕ್ಷಮಾ-
ಶೀಲ ಕೊಂಚ ಇರುವ
ಅವಧಿಯುಂಟೆ ? ಕಾಮೋಪಶಮನ ಹೆ-
ಣ್ಣಲ್ಲಿ ಕಾಣಬಹುದೆ ?
ರಾಜಕೀಯದಲಿ ಅಚಲ ಮೈತ್ರಿ ಚಿರ
ಕಾಲ ಉಳಿಯಬಹುದೆ ?

೩

ಗಣಕಗಣಿಕೆಯರ ನೀತಿಗಿಂತಲೂ
ವಿವಿಧ ರಾಜ ನೀತಿ—

ಬದಲ ತೋರಿ ಬದಲಾಗದುಳಿವ ಗುರಿ
ಗುಪ್ತವಿಡುವ ರೀತಿ !
ಹಳೆಯ ಹಾಡನೇ ಮತ್ತೆ ಮತ್ತೆ ಹೊಸ
ರೂಪಗಳಲಿ ಹಾಡಿ
ಗೆಲುವನೊಂದೆ ಪೂಜಿಸುವುದೆಂಬುದನು
ಮರೆತೆವಯ್ಯ ನೋಡಿ !

೪

ಮರೆಯೆವೆಂದಿಗೂ ಇನ್ನು ನಾವು ಈ
ಕ್ರೂರ ಸತ್ಯವನ್ನು
ಬರೆಯನೆಳೆದ ಹಾಗೆದೆಯೊಳುದಯಿಸಿದ
ಅದರ ಚಿತ್ರವನ್ನು !
ಬೋಧಿವೃಕ್ಷ ಹಿಮಗಿರಿಯ ಮೇಲಿರುವ
ಬೆಳ್ಳಿ ಬೆಟ್ಟ ನಮಗೆ—
ಕ್ರೋಧವುಗುಳ್ವ ರುದ್ರಾಕ್ಷ ಕಾವಳವ
ಕಳೆಯೆ, ಬೆಳಕು ಗುಡುಗೆ !

೫

ಪರಾಕ್ರಮಣ ಧೋರಣೆಯ ದೈತ್ಯರಿಗೆ
ಮೋಸ ಹೋಗಿ ವರವ
ಕೊಟ್ಟ ರುದ್ರ ನಿರ್ವೀರ್ಯಗೊಳಿಸದಿರ-
ನದರ ಧೂರ್ತ ಬರವ !
ಅವನ ಗಣಗಳಾಗಿರುವ ನಾವು ವಿ-
ಷ್ಣು ಸ್ವರೂಪದಿಂದ
ಇರಿವ ಬೆಡಗ ಮೆರೆಯಿಸಲು ಮುತ್ತಿದರೆ
ಚೂಣಿ ಚೂಣಿಯಿಂದ !

೬

ಮಯನ ಮಾಯೆಯಾಯುಧವನಿದಿರಿಸಿಲು
ವಿಶ್ವಕರ್ಮರಾಗಿ
ಭಯಕೆ ಭಯವ ಹುಟ್ಟಿಸುವ ಶಸ್ತ್ರಗಳ
ಸವೆದು ಸಿದ್ಧರಾಗಿ
ನಿಲುವೆವೀಗ ತ್ರೈವಿಷ್ಟಪಾಂತದಲಿ
ಪಾಶುಪತವ ಹಿಡಿದು—
ಗೆಲುವಿನಮಲನಿಳಿಸುವೊಡೆ ದೈವಬಲ-
ವುಂಟು ಹಗೆಯ ತಡೆದು !

೭

ಕ್ಲೈಬ್ಯವನ್ನು ತೆಗೆದೆಸೆದು ಹೊರಟಹೆವು
ರಾಷ್ಟ್ರಪತಿಯ ಕರೆಯ
ಕೇಳಿ ಕೃಷ್ಣ ಸಂದೇಶ ಪಡೆದ ಫಲು-
ಗುಣನ ಹಾಗೆ; ಹರಿಯ
ಏರಿಬಂದವೊಲು ವೃದ್ಧ ದಂಡನಾ-
ಯಕರು ಕೂಡ ಕೆರಳಿ
ಕಾಳೆಗರೆಯ ಕೊಡುತಿಹರು ಹಗೆಯ ಗಡಿ-
ಯಾಚೆಗೆಸೆಯೆ ತೆರಳಿ !

— ಬಿ. ಎಚ್. ಶ್ರೀಧರ

# ಜಯಭೇರಿ

ಜಯಭೇರಿ ? ಜಯ ಕೊನೆಗೆ. ಮೊದಲಲೇ ಜಯವೆ ?
ಯಾರಿಗೇ ಇರಲಿ, ಜಯವೇನನಿತು ಸ್ವಯವೇ ?
ಎದುರಾಳಿಯನು ಮೋದಿ ಗೆದ್ದುದನು ಸಾರಿ
ಹೊಡೆವ ಗೆಲವಿನ ದಿನದ ಭೇರಿ ಜಯಭೇರಿ.

ಜಯ ಕೊನೆಗೆ ? ಕಾಣುವುದು ಕೊನೆಗೆ. ಸರಿ. ಅದನು
ತರುವ ಸಾಧನ, ನಮ್ಮ ಒಳ ಹೊರಗ ಹದನು
ಮೊದಲಿಂದ ಇರಬೇಕು. ಅದರ ಪರಿ ಎಂತು ?
ಅದನೋಡಿ, ಎರಡು ಪಕ್ಷದ ಮಧ್ಯೆನಿಂತು.

ಬಾಯಿ ಭಾಯ್ ಭಾಯ್ ಎಂದು ಒದರುತಿಹ ಹೊತ್ತು
ಚೀನೀಯ ಮನಸು ಕೃತ್ರಿಮವ ಹಿಡಿದಿತ್ತು.
ನಂಬಿಕೆಯ ಮೂಡಿಸುತ ದ್ರೋಹವನು ಬಗೆದು
ಹಿಡಿದರಿವರೆಮ್ಮ ಹೆಗ್ಗತ್ತಿಡೆಗೆ ನೆಗೆದು.

ಏನಿದೇತರದೆಂದು, ಇಂತುಂಟೆ ಎಂದು,
ನೊಂದ ಗೆಳೆಯರು ನಾವು ಕಣ್ತೆರೆವ ಮುಂದು,
ಕೆಸರಕೂಪಕೆ ನಮ್ಮ ದೂಡಿ, ದಡ್ಡರನು
ಬೆಳ್ಳಿಸಿದೆವೆಂದು ಹಿಗ್ಗಿದುದಿವರ ತೆರನು.

ಗೋವಮಂದೆಯಮೇಲೆ ಹಾರಿಬಹ ಹುಲಿಯೋ,
ನೆಲನನುಂಗಲು ಮುಂದೆಬಹ ಕಡಲ ಅಲೆಯೋ,
ಸೀತೆಯನು ಕದ್ದ ರಾವಣನ ಹೊಸ ಪರಿಯೋ,
ಕೋಳಿಯನು ಕದಿಯೆ ಸುಳಿಯುವ ಇರುಳ ನರಿಯೋ ?

ಹೊಸ ಬದುಕಲು ಸುಳ್ಳ ನೆರವಿರಲೆಬೇಕು.
" ನಿನ್ನ ತಪ್ಪನು ಜೊತೆಯವನ ಮೇಲೆ ಹಾಕು; "
ಇದುವೆ ವಂಚಕ ಸೂತ್ರ. ತಾವೆಮ್ಮ ತಾಗಿ,
ಇವರು ಹೊರಿದರು: " ಭರತವರ್ಷ ತಾನಾಗಿ

ನಮ್ಮ ತಾಗಿತು. ಆತ್ಮರಕ್ಷಣೆಗೆ, ತೀರ
ವಿಧಿಯಿಲ್ಲ, ನಾವು ಕಾದಿದೆವು. ದುರ್ವಾರ
ದುಷ್ಟ ಜನ ಇದರಿಂದ ನಮಗೆನಿತು ಕಷ್ಟ !
ಹಾ ! ಭರತವರ್ಷವಿದು ದುಷ್ಟ, ಸುಸ್ಪಷ್ಟ. "

ಆಯುಧವ ಸಿದ್ಧ ಹಿಡಿದಿದ್ದ ಈ ಜನವ
ಅದ ಹುಡುಕುವರು ತಾಗಿದೆವು: ನೋಡಿ ಘನವ !
ನಿದ್ರಿಸುತಲಿದ್ದ ಮನೆವಳ ಕದಿವನಿದ್ದ;
ಅದ ತಪ್ಪಿಸಲು ಹೆರವ ಸುಳಿದೊಳಗೆ ಬಿದ್ದ !

ಅಯ್ಯ ಮೋಟ್ಸೆ ಡುಂಗ್, ಚೌಯಿ, ಚೂ ಎನ್ ಲೇಯ್,
ತಿಳಿವು ಸಾಲದ ನಮ್ಮ ಜನ, ನಿಮ್ಮ ಭಾಯ್ ಭಾಯ್
ಸೋಗ ಮಾತಿಂದ ಎಚ್ಚರ ಮರೆತು, ನಿಮ್ಮ
ತಡೆಯಲಾಗದ ಪರಿಯನಿದ, ನಿಮ್ಮ ಧರ್ಮ,

ನಿಮಗಾದ ಜಯವೆಂದು ನಮ್ಮ ಸೋಲೆಂದು,
ನೆನೆವ ಭ್ರಾಂತಿಗೆ ಸಿಲುಕಬೇಡಿ ಪ್ರಿಯಬಂಧು.
ಜಯ ಕೊನೆಗೆ; ಮೊದಲಿನ ಅಚಾನಕದ ಗೆಲವು
ಗೆಲವಲ್ಲ; ಜಯ ಕೊನೆಗೆ ನಿಲ್ಲುವನ ನಿಲುವು.

ನಮ್ಮ ನಂಬುಗೆ, " ಸತ್ಯಮೇವ ಜಯತೇ " ಎಂದು;
" ನಾನೃತಂ " ಎಂದು. ನಂಬುಗೆ ಇಂಥದಿನ್ನೊಂದು,
" ಯತ್ರ ಧರ್ಮಸ್ತತ್ರ ಜಯ " ಎಂದು. ನೀವೇನ
ನಂಬಿಹಿರಿ ? ಏನ ನಂಬಿಹುದು ಹೊಸ ಚೀನಾ ?

ಸುಳ್ಳು ಗೆಲ್ಲುವುದೆಂದೆ ? ಅನ್ಯಾಯ ಸರಿಯೆಂದೆ ?
ಅಂತಲ್ಲದಿರೆ ನೀವು ಏಕಿಂತು ಈ ಹಿಂದೆ
ನಿಮ್ಮ ಹಿರಿಯರ ಹೊರೆಗ ಬುದ್ಧನನು ಮರೆತು
ಹಿಂಸ್ರಜನರಾಗಿಹಿರಿ ಸೆಟೆದಿಂತು ಬೆರೆತು ?

ಭಾರತದ ಜನ ನಿಮ್ಮ ನೆಲದ ಅಂಗುಲವ
ಬಯಸಿಲ್ಲ. ನೀವೇಕೆ ನಮಗಮಂಗಳವ
ಮಾಡಲೆದ್ದಿರಿ ? ಧರ್ಮ ಎತ್ತ ಜಯ ಅತ್ತ ಎನೆ,
ಅಪ್ಪಿ ಹಿಡಿದಿರಿ ನೀವು ಅಪಜಯದ ಕತ್ತಲನೆ.

ದಿಟ ಸಟೆಯ ಕದನದಲಿ ಸಟೆ ಮೊದಲು ಗೆದ್ದು
ಕೊನೆಗೆ ಸೋಲುವುದು. ದಿಟ ಬಿದ್ದರೆಯು ಎದ್ದು
ಕೊನೆಗೆ ಗೆಲ್ಲುವುದು. ಇಂತಾದುದನು ನೂರು
ಬಾರಿ ನೋಡಿದೆ ಲೋಕ. ದಿಟ ಗೆಲವ ಬೇರು.

ಆದರಿಂದ, ಸೋದರರೆ, ನಯಕೆ ಕಿವಿಗೊಟ್ಟು
ಹಿಂದಿರುಗಿ ಬದುಕಿ; ಇಲ್ಲವೆ ಸತ್ತು ಕೆಟ್ಟು,
ಹಿಟ್ಲರ್ ಮುಸೋಲಿನಿಯ ತೆರ ಮೊದಲು ಸೊಕ್ಕಿ,
ಬೊಬ್ಬಿಟ್ಟು, ಕೊನೆಗೆ ಕೆಡೆವಿರಿ ಮಣ್ಣು ಮುಕ್ಕಿ.

ಬಂಧುಗಳ ಕೊಲ್ಲಲಾರದೆ ಅಂದು ಪಾರ್ಥ
ಸೆಣಸ ಹಿಂಜರಿದ ಪರಿ ಈ ನುಡಿಯ ಅರ್ಥ.
ಶಾಂತಿಯಲಿ ನಡೆಯಿರಿ; ನಿಮಗೆ ಸುಖವಕ್ಕೆ.
ಒಲ್ಲಿರಾ ? ನಿಮಗೆ ಕಾದಿದೆ ಸೋಲ ತೆಕ್ಕೆ.

ನಾವು ಜಯಿಸುವ ಮಂದಿ. ದಿಟ ನಮ್ಮ ದೈವ.
ದಿಟಕಾಗಿ ನಾವೆಮ್ಮ ಮೆಯ್ ಮನಸು ಜೀವ,
ಮನೆ ಮಠವ, ನೆಲ ಹಣವ, ಸಂತಸದಿ ನೀಡಿ
ಕಾದಲಣಿ. ಇದರಲಿನಿಸೂ ಇಲ್ಲ ಶೋಡಿ.

ಭರತವರ್ಷದ ಕುವರ ಕುವರಿಯರು ನಾಡ
ಗೌರವದ ಸಲು ಏತರದನೆ ಈಡಾಡ
ಅನುವಾಗಿಹರು. ದೈವ, ಸತ್ಯ, ಸ್ವದೇಶ
ಇವು ಒಂದು ನಮಗೆ; ಒಂದೇ ಅಭಿನಿವೇಶ.

ಬಿದ್ದ ಕೆಸರಿನ ಕುಣಿಯ ಬಿಟ್ಟು ದಡವೇರಿ,
ನಿಮ್ಮ ಮೋಸದ ಮೇಲೆ ಸೋಲ ಹೊರೆ ಹೇರಿ,
ನಿಮ್ಮನಟ್ಟುವ ಪಣವ ತೊಟ್ಟಿಹುದ ಸಾರಿ,
ಹೊಡೆವುದಿದೊ ನನ್ನ ಒಡಹುಟ್ಟು ಜಯಭೇರಿ.

ಭೇರಿ ಮೊರೆವುದು ನಾವು ಗೆದ್ದೆವೆಂದಲ್ಲ.
ಗೆದ್ದವನು ಸಹ ಗೆಲವು ತನ್ನದೆನೆ ಸಲ್ಲ.
ಸತ್ಯವೆ ಜಯಿಸುವುದು. ಈ ಹದನ ಸಾರಿ
ಮೊದಲಲೇ ಮೊಳಗುತಿದೆ ನಮ್ಮ ಜಯಭೇರಿ.

—ಶ್ರೀನಿವಾಸ

# ಕಟ್ಟುವಿರ ಭಾರತವ ?

ಮುಗಿಲ ಕೆಚ್ಚಲ ಸುಧಾರಸ ಹಿಂಡಿ ಕೆರೆಕಟ್ಟಿ
ಮರ್ತ್ಯ ಭೂಮಿಯು ಬರತ ಬಾಯ್ಗೆ ತಂಪೀಯಲಿದೆ !
ಓಹೊ ! ಸಿಡಿಲಿನ ಜೀವ ಶಕ್ತಿಮಾಯೆಗೆ ಸೋತು
ಬಿಟ್ಟಿಯಾಳಿಗದ ಮನೆತೊತ್ತಾಗಿ ಬಾಳಲಿದೆ !
ಗಳಿಗೆಗಳು ಶತಮಾನ ಸಾಧ್ಯ ಸಾಫಲ್ಯಕ್ಕೆ
ಅರಳಲಿವೆ ! ಬಾನ ಮಿಂಚಿನ ಸೊಡರ ಚಿಗುರಿನಲಿ
ಇಂದ್ರಚಾಪ ವಿಲಾಸ ತೋರಣಗಳೇಳಲಿವೆ !
ದಿವಕೆ ಸರಿಹೆಗಲಾಗೆ, ಕಟ್ಟುವಿರಿ ಭಾರತವ.

ಊಷರದ ಬರಡಿನಲಿ ಹಚ್ಚಹಸುರಿನ ಹುಟ್ಟು
ಚೇತರಿಸುತಿದೆ ; ಯಂತ್ರ ಘಟ್ಟದ ತಾಳಕ್ಕೆ
ಸ್ನೇಹರಸ ಧಾತುಗಳ ಕಪ್ಪಕಾಣಿಕೆ ಹಿಡಿದು,
ನರ್ತಿಸುವಳೀ ವಸುಧೆ ಪಾರ್ಥಿವಾರಾಧನೆಗೆ !
ಕರ್ಮಶಾಲೆಗಳಲ್ಲಿ ಕುದಿವಗ್ನಿಕುಂಡದಲಿ
ಪ್ರಾಚೀನ ಕರ್ಮಗಳು ಕರಗಿ ನೀರಾಗಲಿವೆ !
ಅಗ್ನಿದೀಕ್ಷಿತರೆ ! ನವಧರ್ಮ ಕರ್ಮಾರರೇ !
ಭವ್ಯಸಂಕಲ್ಪದಲಿ ಕಟ್ಟುವಿರಿ ಭಾರತವ !

ಬ್ರಹ್ಮಬೀಜಾಣುಗಳ ಹಿಂಡಿ ಹಿಳಿದೀ ನೆಲದ
ಜೀವನಕೆ ಸಂಜೀವನವ, ತುಷ್ಟಿ ಪುಷ್ಟಿಯ ರ-
ಸಾಯನವನುಣಿಸುವಿರಿ ; ಭೌತಿಕಾರಂಭದಲಿ
ದೈವಿಕವನಿದಿರೊಡ್ಡಿ ಭುಜವೊರಸಿ ನಿಲ್ಲುವಿರಿ !
ಗ್ರಹಗತಿಯ ಗೆಲ್ಲುವಿರಿ ! ನಕ್ಷತ್ರ ಲೋಕಗಳ
ನೆರೆಯೊಕ್ಕಲಾಗುವಿರಿ ! ವಿಜ್ಞಾನರಭಸದಲಿ

ಸೃಷ್ಟಿಯ ಮಹಾರಥಕೆ, ಸುಗತಿಯ ಮನೋರಥಕೆ,
ವೇಗವನು ಕೂಡುವಿರಿ,– ಕಟ್ಟುವಿರಿ ಭಾರತವ !

ನವ್ಯ ಭಾರತದ ಜಯದಿತಿಹಾಸ ಕಾವ್ಯವನು
ಹೇಳಲವತರಿಸಬೇಕೇ ಪುರಾಣ ವ್ಯಾಸ ?
ಕಂಡುದೇ ಇತಿಹಾಸವುಂಡುದೇ ಕಾವ್ಯರಸ !
ರಾಜಕೀಯ ದ್ಯೂತಕೇಲಿಯಲಿ ಹರಿಹಂಚು
ನಾಡಾಯ್ತು ; ನರಮೇಧ ಶಿಶುಯಾಗ ರಕ್ತ ಗಂ-
ಗಾಸ್ನಾನವಾಯ್ತು; ಪಶುಗುಣಕೆ ತರ್ಪಣವಾಯ್ತು;
ಈಶ್ವರಾರ್ಪಣವಾಯ್ತು ಮನುಕುಲದ ಮಾಂಗಲ್ಯ;
ಶಾಂತಿಪರ್ವವನರಸಿ ಕಟ್ಟುವಿರಿ ಭಾರತವ !

ಕ್ಷೀರಸಾಗರವಿತ್ತು ಪಾನಪಾತ್ರವ ತುಂಬಿ;
ಕಲ್ಪತರು ಶಾಖೆ ನಮ್ಮಂಗಳಕೆ ಬಾಗಿತ್ತು;
ವೇದ ಮಂತ್ರದ ಘೋಷ ರೋಮರೋಮಾಂಚಗಳ
ಮೂದಲಿಸುತಿತ್ತು; ಧರೆ ನಂದನವೆ ಆಗಿತ್ತು;
ಪುಣ್ಯಭೂಮಿಯ ಮಣ್ಣೊಳಮೃತ ಫಲ ಬೆಳೆದಿತ್ತು;
ಅದರ ಕಣ್ಣೊಳು ವಿಶ್ವದರ್ಶನದ ಬೆಳಕಿತ್ತು;
ಇರದುದೋ ಇದ್ದುದೋ ಸವಿನೆನಪಿನೀ ತುತ್ತು ?
ಇರುವ ಇಹಸತ್ಯದಲಿ ಕಟ್ಟುವಿರೆ ಭಾರತವ ?

ಹಾಳು ಹೋಳಾದೆದೆಯ ಸುಗ್ಗಿಯನು ಚಿಗುರಿಸುವ
ಪ್ರೇಮರಸದಾಖಾತಗಳ ಕೋಡಿ ಹರಿಸುವಿರ ?
ಪುರುಷಾರ್ಥ ಸಂಕಟ ಮಹಾವರ್ತಗರ್ತಗಳ
ಸಂಧಾನ ಸೇತುಬಂಧವ ರಚಿಸುವಿರ ? ಧರ್ಮ
ಜಡತೆಯಂಚಿನಲಿ ಕುಂಟುತಿದೆ ಜೀವದ ನಾಡಿ;
ಮಿಂಚು ಹಜ್ಜೆಯ ಕೂಡಿ ಹೂಡಿ ಹಿಗ್ಗಿಸುವಿರಾ ?

ವಜ್ರಧಾತುಗಳ ವೀರ ಪ್ರತಿಷ್ಠೆಯಲಿ, ಸೇ-
ವಾ ಪುಣ್ಯನಿಷ್ಠೆಯಲಿ, ಕಟ್ಟುವಿರ ಭಾರತವ ?

ವಾಯುಮಂಡಲವ ಕದಡಿದೆ ವಿಷಪ್ರಾಣ;
ಭೂಗರ್ಭದಲಿ ತೇಲುತಿದೆ ವಿಷಭ್ರೂಣ !
ವಿಜ್ಞಾನದುನ್ಮತ್ತ ತಾಂಡವಾಡಂಬರಕೆ
ಸಜ್ಜುಗೊಂಡಿಹುದು ಭೂತ ಪ್ರೇತ ಸಂತಾನ;
ಶೀಲಗಳ ಹೊಲೆಯು ನಾಗರಿಕತೆಯ ಮಸಣದಲಿ
ಆತ್ಮಸಂಸಾರಕಾಗದೆ ಶವದ ಸಂಸ್ಕಾರ ?
ಸಹಜ ಸುಂದರ ಮಾನವೀಯ ಗುಣದುನ್ನತಿಯ
ಉತ್ತರೋತ್ತರಕೆ ಕಟ್ಟುವಿರ ಈ ಭಾರತವ ?

ಭಾರತದ ಅಣುರೇಣು ನಮ್ಮೊಡಲ ಪರಮಾಣು !
ನಮ್ಮ ಧಮನಿಯ ನೆತ್ತರೀ ನೆಲದ ತಿಳಿನೀರು !
ಕೋಟಿ ಜೀವಗಳುಸಿರ ಗಂಧವಹನೀಪವನ !
ನಾದ ಮೂರ್ತಿಯ ಭಾವದಂತರಂಗದ ರಂಗ
ವೀಗಗನ; ಸವಿತೃವೇ ಬುದ್ಧಿ ಸಾರಥಿ; ನಮ್ಮ
ಜನ್ಮಜನ್ಮಾಂತರದ, ಕರ್ಮಕರ್ಮಾಂತರದ
ಬೇರು ಕೊಚ್ಚಿಹುದಿಲ್ಲಿ; ಬೇರಿಲ್ಲ ಗತಿಯೆಂದು,
ಬೇರಿಲ್ಲ ಮತಿಯೆಂದು ಕಟ್ಟುವಿರ ಭಾರತವ ?

—ಕಡೆಂಗೋಡ್ಲು ಶಂಕರಭಟ್ಟ

# ಏಳ್, ಹಿಮಾಲಯವೆ ಏಳ್ !

೧

ಏಳ್, ಹಿಮಾಲಯವೆ ಏಳ್ ! ಏಳ್, ಉಮಾಲಯವೆ ಏಳ್ !
ನಿದ್ರೆಯಿಂ ಜಡತೆಯಿಂ ಮಾಂದ್ಯದಿಂ ಮೇಲಕೇಳ್ !
ಒಡಮುರಿದು, ಮೈಮುರಿದು ಚೇತರಿಸಿ ಸಿಡಿಯುತೇಳ್ !
ಓ ರಸಾತಳದಿ ಕುದಿಕುದಿವ ಜ್ವಾಲೆಯನೆ ಕೇಳ್ !
ತಪದ ತಳದಲಿ ಅಯ್ಯೊ ! ತಮವೆ ಹೆಡೆಯೆತ್ತಿರಲು,
ಪಂಚಶೀಲವ ಮೆಟ್ಟಿ ವಂಚನೆಯೆ ಮುತ್ತಿರಲು,
ಸ್ನೇಹದಂಚಿನಲಿಯೊಳಸಂಚು ಹೊಂಚುತ್ತಿರಲು,
ವಿಷ–ಹೃದಯ–ಮಧುರ–ಮುಖವರರೆ ಮಿಂಚುತ್ತಿರಲು
'ಹಿಂದಿ–ಚೀನೀ ಭಾಯಿ' ಎಂದ ಚೌ-ಎನ್-ಲಾಯಿ !
ಈ ಮಾತು ಹುರುಳಿರದ ತಿರುಳಿರದ ಜೇನ್–ಬಾಯಿ !
ಏನ್ 'ಮಾವೊ ?' ಓ ಬೇವೊ ! ಹಾ ಡಾವೊ ! ಅಹ ಹಾವೊ !
ಭಾರತಾಕ್ರಮಣ–ದಾಹದಲಿ ನುಗ್ಗಿದ ನೋವೊ !
ದಿಟದ ಭಾರತದೊಡನೆ ಕುಟಿಲತೆಯೆ ಓ ಚೀನ ?
ನಂಬಿದವರೆದೆಯಿರಿವ ಕೃತಿಯದೆಂತಹ ಹೀನ !

೨

ಯುಗಯುಗದ ಸತ್ಯ–ಶಿವ–ಸೌಂದರ್ಯ–ದರ್ಶನದಿ
ಸಂತತ–ತಪಶ್ಚರಣ–ದೇದೀಪ್ಯ– ಸ್ಪರ್ಶನದಿ
ಉತ್ತುಂಗ– ಸುವಿಶಾಲ– ನಿಶ್ಚಲಾಕರ್ಷಣದಿ
ಋತ–ವಿಜಯಕನೃತದೆಡೆ ನಡೆದ ಸಂಘರ್ಷಣದಿ
ವಿಶ್ವಕಲ್ಯಾಣ–ಧ್ಯೇಯದಿ ಮೆರೆದ ಶೌರ್ಯದಲಿ
ಅವಿಚಲಾಜೇಯ– ಶಾಶ್ವತ ಧೈರ್ಯ–ವೀರ್ಯದಲಿ

ಆಹಹ ! ಗೌರೀಶಂಕರೌಂಕಾರ–ತೂರ್ಯದಲಿ
ಧವಳ–ಗಂಗಾ–ಸಿಂಧು–ಪಾವನೌದಾರ್ಯದಲಿ
ಎಸೆವಸಮ–ವಿಜಯೀಂದ್ರ ಹೈಮಾಚಲನೆ ಏಳು !
ನಿಸ್ವಾರ್ಥ-ತ್ಯಾಗ–ಸದ್ಯೋಗ–ಪ್ರಭೆಯಲಿ ಏಳು !
ತ್ವತ್–ಪಾಂಚಜನ್ಯಕೋ ಸಹ್ಯಾದ್ರಿ–ವಿಂಧ್ಯಾದ್ರಿ
ಗಿರಿಗಳೆಲ್ಲೆಚ್ಚರಲಿ ! ಹಾರಿ ಹೋಗಲಿ ನಿದ್ರೆ !
ಪ್ರಕ್ಷುಬ್ಧ-ಕಾಸಾರ–ನದ--ನದೀ–ಸಾಗರವು
ಭೋರ್ಗರೆದು ಉಕ್ಕಲ್ಯೆ ! ಪ್ರಬಲ–ಜಲದಾಗರವು !

೩

ಏಳ್ ಶಿವನೆ ! ರಣ–ರುದ್ರ–ಕಾಳ–ಭೈರವನಾಗಿ
ಪ್ರಳಯ-ನಾಟ್ಯವನೆ ಗೈ ! ಭ್ರಮಿಸಲೀ ಬ್ರಹ್ಮಾಂಡ !
ಏಳ್ ಶಿವೆಯೆ ! ರಣ–ಚಂಡಿ–ಕಾಳ–ಭೈರವಿಯಾಗಿ
ಕೆನ್ನಾಲಗೆಯ ಚಾಚಿ, ಕಟಿ–ಕಂಠ-ಕರ-ರುಂಡ-
ಮಾಲೆ, ಜ್ವಾಲೆಯೆ ಆಗಿ ನರ್ತಿಸೌ ! ಹುಡಿಗುಟ್ಟಿ
ಹಾರಲೆಲ್ಲವು ವೈರ ! ಏಳೇಳಿ ನಡುಕಟ್ಟಿ !
ಒಂದೊಂದು ವ್ಯಕ್ತಿಯೂ ಆ ಮಹಾ–ಶಿವ-ಶಕ್ತಿ–
ಹೈಮಾದ್ರಿಯಾಗೇಳಿ, ಬೆಳಗೆ ಭಾರತ–ಭಕ್ತಿ !
ಮುಕುರಿದಿರುವೆಯು ಜಿಟ್ಟಿ–ಹಿಂಡುಗಳ ನಾಟಕಕೆ
ಬೀಳುವದು ತೆರೆ ! ಅಂಜುವದೆ ಸಿಂಹ ಕೀಟಕಕೆ ?
ಏಳಿ ರಣಚಂಡಿಯರೆ ! ಏಳಿ ರಣ–ರುದ್ರರೇ !
ಸಾವ ಹಾವನು ಮೆಟ್ಟಿ ಭಾರತ ಸುಭದ್ರರೇ !
ಜನ್ಮ–ಭೂಮಿ–ಜನನಿ ಸ್ವರ್ಗದಿಂ ಮಿಗಿಲೆ ಸರಿ !
ಇವರ ಜಯ–ರಕ್ಷೆ ತಹ ಮರಣವಮರತೆಯು ಸಿರಿ !

— ಈಶ್ವರ ಸಣಕಲ್ಲ

# ಸಟೆ ದಿಟಕೆ ನಿಲ್ವುದೆ?

೧

ಹೆಜ್ಜೆ ಹೆಜ್ಜೆಗೂ ಸ್ನೇಹ-ಶಾಂತಿಗಳ ತಾಳ ಹಿಡಿವ ಜನಕೆ
ಘಜ್ಜೆಗಟ್ಟಿ ಹತ್ತಿರಕೆ ಬರಲು, ಇದು ಎಂಥ ಕೊರಳ ಕುಣಿಕೆ !
ಗುರಿಯು ನೇರ ನಡೆದಿರಲು ಬೇಲಿಯೊಳಗಿಂದ ನೆಗೆದು ಬಂದ
ಅರಿಯು ನೇಹನುಡಿ ಮರೆದು ನಮ್ಮ ನಡೆಗಡ್ಡವಾಗಿ ನಿಂದ !

೨

ಇಡಿಯು ನಾಡ ಮನೆ ಕಟ್ಟಿ ನುಡಿಯು ಪಡಸಾಲೆಗಳನು ರಚಿಸಿ
ಬಿಡಿಯು ಭಾವಗಳನೊಂದೆ ಎರಕದಲಿ ಏಕರೂಪಗೊಳಿಸಿ
ಅಂದ ಬೇರೆ, ಹೂಹೃದಯವೊಂದೆ- ಮಧುಬಿಂದು ಪ್ರೇಮಸೂಚಿ
ಎಂದು ನಂಬಿ ನಡೆದವರು ನಾವು ಕಲ್ಯಾಣ ಸೀಮೆಯರಸಿ !

೩

ತುಂಬು ಬಾಳಿಗೊಂದೊಂದೆ ಬಾಂಬು ಯಮನೊಸಗೆಯೆಂಬ ಭೀತಿ
ತುಂಬಿರುವ ಕಾಲದೊಳು ಜಗದ ಕಾಲು ತತ್ತರಿಸದಿರುವ ನೀತಿ—
ನಮ್ಮಾತ್ಮತೇಜ ಬುವಿಗೆಲ್ಲ ಸಹಜ ಸದ್ಭಾವವಿತ್ತ ನಿಧಿಯು !
ಕಮ್ಮಾರ ಕುಲಿಮೆಯಲಿ ಕಾಯ್ದು ಬೀಡಿಗಿದು ನೀರು ಹಿಡಿವ ವಿಧಿಯು !

೪

ಬರುವ ಭಾಗ್ಯದೊಳು ತರುವರೊಬ್ಬರಲ್ಲದೆಯೆ ನೂರು ಮಂದಿ
ಗರುವವಿಲ್ಲದೆಯೆ ಹಂಚಿ ತಿಂದು ಸುಖ ಪಡೆಯಲೆಂದ ಗಾಂಧಿ !
ಆ ಪ್ರೇಮಪಥದಿ ಈ ರಾಷ್ಟ್ರರಥದ ಸಾರಥ್ಯ ವಹಿಸಿ ನೆಹರು
ಸುಖಧಾಮದೆಡೆಗೆ ನಾಡವರ ನಡೆಸುತಿಹ ನಿತ್ಯ ಸುರಿಸಿ ಬೆವರು !

೫

ಆದರಿಂದು ಏನೆಂಥ ಕಪಟ ನೆರೆಹೊರೆಯ ನೆಂಟರಿಂದ !
ಸಾದೆತ್ತಿಗೆರಡು ಕಲ್ಲೆಸೆದು ಕೀಟಲೆಯ ಕೊಡುವುದೇನು ಚಂದ !
ನಂಬಿದಂಥ ಸ್ನೇಹಿತನೆ ನಮ್ಮ ಪಿತ್ರಾರ್ಜಿತಾಸ್ತಿಯನ್ನು
ತುಂಬಿಕೊಳಲು ಕಣ್ಕಿಸಿದು ಬರಲು, ತೋರುವುದೆ ಅವಗೆ ಬೆನ್ನು ?

೬

ಬೆಳೆದು ಬಂದ ನಯವಿನಯದಿಂದ ದೂರಾಗಿ ಸಿಡಿದು ನಿಂದು
ಕಳೆದುಕೊಂಡ ಉಂಗುರವ ಹುಡುಕುವೊಲು ಈಚೆಮನೆಗೆ ಬಂದು,
ಇಲ್ಲಿರುವ ಸೊತ್ತು ಸಹ ತನ್ನದೆಂಬ ಹಿಕಮತ್ತು ಹಾಕಬೇಕೆ ?
ಬಲ್ಲಿದರು ಕಿವಿಯ ಹಿಂಡಿದರು ಕೇಳದಿರಲಿನ್ನು ತಲೆಗೆ ಒನಕೆ !

೭

ಜಯವು ನಮಗೆ ಕಟ್ಟಿಟ್ಟ ಬುತ್ತಿ– ಕಣಿ ನುಡಿವುದಾತ್ಮಪಕ್ಷಿ !
ಭಯವೆ, ದುಷ್ಟಸಂಹಾರದಿಂದ ಧರೆಗೀಯೆ ಸತ್ಯಸಾಕ್ಷಿ ?
‘ ಶಿವನಾದೊಡೇಂ ಸಟಿ ದಿಟಕೆ ನಿಲ್ವುದೆ ? ’ ತಪಸಿ ಗಿರಿಜೆಯುಸಿರು
ಕವನ ಮಾತ್ರದೊಳಗಲ್ಲ, ನಮ್ಮ ಜೀವನದಿ ಕೂಡ ಹಸಿರು !

— ಬಿ. ಎ. ಸನದಿ

# ದೇಶದೇವಿಯ ಕರೆ

ಏಳಿರಿ ಭಾರತಮಾತೆಯ ಮಕ್ಕಳೆ
ನವನರಕಾಸುರಮರ್ದನಕೆ;-
ಕೈದುವ ಕೊಂಡೆದ್ದೇಳಿರಿ, ಕೆರಳಿರಿ
ಬಂದೀ ಭಾರತದುರ್ದಿನಕೆ !

ನಮ್ಮ ನಾಡಿನ ನಾಡಿನಾಡಿಯಲಿ
ಮೊಳಗಿದೆ ಈ ಕರೆ ಹರೆಯಂತೆ !
ಭಾರತಕೇಸರಿ ಶತಶತಮಾನದ
ನಿದ್ದೆಯ ಕೊಡವುತ ಏಳುತಿದೆ !

ಶಾಂತಿ ತಪದ ತವರ್ಮನೆ ಹಿಮಗಿರಿ
ನಡುಗಿದೆ ಸಮರದ ಆರ್ಭಟಕೆ;
ಮೌನಸಮಾಧಿಯ ತುಷಾರಧವಳತೆ
ರಕ್ತಪ್ಲಾವಿತವಾಗುತಿದೆ !

ನೆನೆದರೆ ವೈರಿಯ ದುಷ್ಟರ ದಾಳಿಗೆ
ಕೆರಳದ ಭಾರತಸುತನಾರು ?
ವೈರಿಯ ಲಗ್ಗೆಯ ಮುರಿಯಲು ತನುಮನ-
ಧನಗಳ ಬೇಳದ ಗಂಡಾರು ?

ಕಲಿಗಳ ನಾಡಿದು, ಹುಲಿಗಳ ನಾಡಿದು,
ಭೀಮನ ಹನುಮಂತನ ನಾಡು;
ಬೂದಿಯ ಹಾರಿಸಿ ತೇಜವ ಮೆರೆದರೆ
ಬುವಿಯಲಿ ನಮಗಾವುದು ಈಡು ?

ಮುಳುಗದ ಆಂಗ್ಲರ ರವಿಯನು ಮುಳುಗಿಸಿ
ಮೂಡಿತು ನವಭಾರತದೋಜೆ !
ಅಗಸ್ತ್ಯಶಕ್ತಿಯ ಜನಪದ, ಬಂದೀ
ಬಾಲಾರಿಷ್ಟಕೆ ಬೆದರುವುದೆ ?

ಲೋಕವೆ ಅಚ್ಚರಿಯಲಿ ನಿರುಕಿಸುತಿದೆ
ನಮ್ಮೆಸಕದ ಪರಿಗಳನೆಲ್ಲ;
ಮೆಚ್ಚುಗೆ ಮತ್ಸರ ಬೆರಗು ಭಕ್ತಿಗಳ
ಕಣ್ ತಿರುಗುತ್ತಿವೆ ನೂರಾರು !

ಸ್ವಾತಂತ್ರ್ಯವ ನಾವ್ ರಕ್ಷಿಪೆವೆಂತೋ
ಎನ್ನುತ ದಿವದಲಿ ಗಾಂಧೀಜಿ
ಎವೆಯಿಕ್ಕದೆ ದಿಟ್ಟಿಸುವರು; ಹೇಡಿಯು
ಕಂಡರೆ ಮರುಗದೆ ಅವರಾತ್ಮ ?

ರಕ್ಷಿಸಿ ತಾಯ್ನಾಡಿನ ಸ್ವಾತಂತ್ರ್ಯವ
ಅಗ್ನಿಪರೀಕ್ಷೆಯನುತ್ತರಿಸಿ;
ಪೌರುಷದಲೆಯಲಿ ಶತ್ರುವ ಕೊಚ್ಚಿರಿ,
ಹಾರಾಡಲಿ ವಿಜಯಜಯಂತಿ !

ಇದು ಕೈಲಾಸದ ಧೂರ್ಜಟಿಯಾಣೆ,
ಸುರಗಂಗಾಪಿತ ಹರಿಯಾಣೆ !
ನಾಡ ತಂದೆ ಗಾಂಧೀಜಿಯ ಆಣೆ,
ಝಾನ್ಸಿಯ ಮಾರಾಣಿಯ ಆಣೆ !

ಈ ನೆಲ ಬೆಲೆ ತೆತ್ತಿದೆ ಸ್ವಾತಂತ್ರ್ಯಕೆ
ಜಲಿಯನ್‌ವಾಲಾ ಬಾಗ್ ಸಾಕ್ಷಿ !
ಇದ ಕಾಯದ ಜನ ಭಾರತಪುತ್ರನೆ ?
ಅವನೆಂದೆಂದಿಗು ಪರದೇಶಿ !

ನಮ್ಮದು ಈ ನೆಲ, ನಮ್ಮದು ಈ ಬಾನ್,
ನಮ್ಮದು ಹಿಮನಗ, ಗಂಗೋತ್ರಿ;
ನಮ್ಮದು ಈ ಸ್ವಾತಂತ್ರ್ಯದ ಪಂಜು,
ಇವಕಾಗಿಯೆ ಮೀಸಲು ಉಸಿರು !

ಇನ್ನೂ ಸಾಲದೆ ನಮ್ಮನು ಮುಕ್ಕಿದ
ಯುಗಗಳ ಒಳಜಗಳದ ಪಾಪ ?
ಕೊರಗುತ್ತಿರುವಳು ತಾಯ್, ನಿಲ್ಲಿಸಿರೊ
ಮನೆಕಲಹದ ನಾಚಿಕೆಗೇಡ !

ಹೊರಗಾವುದೊ ನುಡಿ, ಒಳಗಾವುದೊ ಬಗೆ,
ಮಾಣಿಸಿ ಈ ಬಕಸೋಗುಗಳ !
ಎಲ್ಲರ ಹಿತದಲಿ ಒಬ್ಬರ ಹಿತವಿದೆ,
ಅರ್ಪಿತ ನಾವ್ ಸರ್ವೋದಯಕೆ !

ಸ್ವಾರ್ಥವ ಸಾಧಿಸಿ ಉರಿಯುವ ಮನೆಯಲಿ
ಗಳ ಹಿರಿಯುವ ಓ ದ್ರೋಹಿಗಳೆ !
ಎಚ್ಚರ ! ನಾಡಿನ ದುರ್ಗೆಯ ನಾಲಿಗೆ
ನೆರಳಾಡುತ್ತಿದೆ ತಲೆಮೇಲೆ !

ರಾಕ್ಷಸ ಮರ್ದನಕೇಳುವ ಕಾಳಿಯ
ಅಷ್ಟಾದಶ ಕರಗಳಿಗೆಲ್ಲ
ನೀವಾಗಿರಿ ಶಸ್ತ್ರಾಸ್ತ್ರ ಸಮುಚ್ಚಯ;
ನಮಗಿದೆ ಜನನಿಯ ಗುರುರಕ್ಷೆ !

ಕೊಡಿ ಧನಕನಕವ, ನೆತ್ತರ ಕೊಡುವಿರ ?
ಬಲಿದಾನವ ಕೊಡುವಿರೊ ಏನು ?
ಕೇಳುತ್ತಿರುವಳು ಭಾರತಮಾತೆ—
ಕೃಪಣತೆ ನಮ್ಮೊಳಗಿನಿತಿಲ್ಲ !

ಒಳಗೂ ಹೊರಗೂ ನಡೆಯಲಿ ಯುದ್ಧ,
ಹರಿಯಲಿ ಆಲಸ್ಯದ ತಿಮಿರ !
ಹೊಟ್ಟೆಯಕಿಚ್ಚನು ಮೊದಲು ನಿವಾರಿಸಿ !
ದುಡಿಯಿರಿ ನವಭಾರತ ಹಿತಕೆ

ಹೊಲಗದ್ದೆಗಳಲಿ ತುಂಬಲಿ ಅನ್ನ,
ಕರೆಯಲಿ ಯಂತ್ರದ ಸುರಧೇನು !
ಮಾಡುವೆಲ್ಲ ಕಾಯಕವೇ ಕಾಳಗ,
ತಾಯ್ನಾಡಕ್ಕರೆಯೊಂದಿರಲು !

ಏಳಿರಿ ಭಾರತಮಾತೆಯ ಮಕ್ಕಳೆ
ನವನರಕಾಸುರ ಮರ್ದನಕೆ !
ಹಗೆಯನು ಬಡಿಯುವ ಪಣತೊಡಿ, ಕೆರಳಿರೊ
ಬಂದೀ ಭಾರತ ದುರ್ದಿನಕೆ !—

ನಮ್ಮೀ ನಾಡಿನ ನಾಡಿನಾಡಿಯಲಿ
ಮೊಳಗಿದೆ ಈ ಕರೆ ಹರೆಯಂತೆ !
ಭಾರತ ಕೇಸರಿ ಶತಶತಮಾನದ
ನಿದ್ದೆಯ ಕೊಡವುತ ಏಳುತಿದೆ !

— ಸಿ. ಪಿ. ಕೆ.

# ಯಾರದು ?

ಯಾರದು ! ಯಾರದು !! ಯಾರದು ಸೇನೆ ?
ಯಾರಿಗೆ ಬಂದಿದೆ ಉಳಿಯದ ಬೇನೆ ? ||
ಹಿಮಗಿರಿಗಳ ನಡು ಪರ್ವತಸಾನು
ತೆಪ್ಪಗೆ ಕುಳಿತಿಹನಲ್ಲಿಯೆ ಶಿವನು ||

ಬೆಂಕಿಯ ಕಣ್ಣನು ಅಡಗಿಸಿಕೊಂಡು
ಉಲುಹಿನ ಸುಳುಹನು ಮಡಗಿಸಿಕೊಂಡು ||
ಧ್ಯಾನದ ಮೌನದ ಆಳದ ತಳದಲಿ
ಸುಳಿವವರಾರೀ ರುದ್ರನ ಬಳಿಯಲಿ ? ||

ಹುಚ್ಚಿನ ಬೆಚ್ಚಿನ ಹುಳುಗಳ ತಂಡೇ
ಇಲ್ಲಿಯು ನಡೆಸುತ್ತಿರುವುದು ಬಂಡೇ ? ||
ಅಲ್ಲಿದೆ ಗಿರಿಜೆಯ ತವರಿನ ತೇಜ
ವಿದ್ಯುತ್‌ಸಂಚಿತ ತವಸಿನ ಓಜ ||

ದುರ್ಗಾ ಮಾತೆಯ ಮಕ್ಕಳ ನಾಡು
ಭಾರತವೊಂದಿದೆ ಕ್ಷಿತಿಯಲಿ ನೋಡು ||
ಷಣ್ಮುಖ ದಳಪತಿ ನವಿಲೇರಿದರೆ
ದಂಡಿನ ಹಿಂಡೇ ನೆರೆವುದು ಬೇರೆ ||

ಹಸಿವೆಯ ಹುಚ್ಚಿನ ಹೊಟ್ಟೆಯ ಕಿಚ್ಚಿಗೆ
ಕದನಕು ಕೃಷಿಹಿತವೆನಿಸಿದೆ ಹೆಚ್ಚಿಗೆ ||
ಹಗೆತನದಲಿ ನಾವ್ ಸಾವುದು ಬೇಡ
ಬದುಕುಳಿದರೆ ಗೆಳೆಗೆಳೆಯರು ನೋಡ ||

ಯಾಕೀ ಸಾವಿಗೆ ಬಲಿಯಾಗುವಿರಿ ?
ಚೀಣರೆ ತೊಲಗಿದರೇ ಬದುಕುವಿರಿ ||

—ಸಿಂಪಿ ಲಿಂಗಣ್ಣ

## ಏಳು! ಮೇಲೇಳು! ಓ ವಿಶ್ವಪುರುಷ!

ಓ! ಭಾರತೀಯನೆ ಏಳು! ಎದ್ದೇಳು!
ಕವಿದಿರುವ ಕತ್ತಲೆಯ ಕುತ್ತಿ ಬಾಳು
ಮುಸುಕಿರುವ ದುಗುಡವನು ಕಳೆಯಲೇಳು
ದೌರ್ಜನ್ಯ ಕ್ಷುದ್ರತೆಯ ಮೆಟ್ಟಲೇಳು!

ಭಾರತದ ಉತ್ತರದಿ ನಡೆದಿಹುದು ದಾಳಿ
ಊದು ಕಹಳೆಯನೂದು, ಹೊಡೆ ಚಂಡೆ ಮದ್ದಳೆಯ!
ನೀ ಪುರುಷಸಿಂಹ, ರುದ್ರನಾಗು ಓ! ವೀರಭದ್ರನಾಗು!
ಹಾರು ಯಜ್ಞದಲಿ, ಎತ್ತಿ ತಾ ಸತಿಯ!

ಸತ್ಯವನೆ ತುಳಿತುಳಿದು ನಿಲ್ಲಬಹುದಸತ್ಯ
ಆದರೀಮಾತು ಅದು ಕ್ಷಣಮಾತ್ರ ಸತ್ಯ!
ಬೆಳಗಿನೆದೆಯನು ಒತ್ತಿ ನಿಲ್ಲಬಹುದೆ ರಾತ್ರಿ
ಹ್ಞುಂ! ಅದು ಸತ್ಯ– ಆದರೆ ಕ್ಷಣಮಾತ್ರ!

ಅದರರಿವು ಇದೆಯೇ ಚೀನಿ ಭಾಯಿಗೆ?
ಅದನಿಂದು ನೀನು ಓ! ಭಾರತೀಯ
ಅವನಿಗೆ, ಆ ರಕ್ಕಸನಿಗೆ ಕಲಿಸು ಬಾ
ಪಾಠವನು, ಸತ್ಯವೆ ಚಿರವೆಂದು!

ಏಳು! ಮೇಲೇಳು! ಎಚ್ಚರಾಗು!
ಓ! ಭಾರತ ಪುರುಷ, ವಿಶ್ವಪುರುಷ!
ದೌರ್ಜನ್ಯ ಕ್ಷುದ್ರತೆಯ ಮೆಟ್ಟಲೇಳು!
ಓ! ಭಾರತೀಯನೆ ಏಳು! ಎದ್ದೇಳು!

—ಪಂಚಾಕ್ಷರಿ ಹಿರೇಮಠ

# ರಣಭೇರಿ

ಮುಟ್ಟುವಿರೊ ಭಾರತಿಯ
ಸೀಮಂತ ರತ್ನವನು ?
ಮೆಟ್ಟಿ ಸೀಳ್ವೆವು ಬಿಡಿರೊ
ದುಷ್ಟ ಯತ್ನವನು ॥

ಕುಲಗಿರಿಯ ಕಿತ್ತೆತ್ತಿ
ಬೀಸಬಲ್ಲೆವು ನಾವು
ಜ್ವಲದಗ್ನಿ ನಾಲಗೆಯ
ಸೀಳಬಲ್ಲೆವು ನಾವು ॥

ಕೊಡನ ಫಣಿ; ಕೆಣಕದಿರಿ
ಹೀನಾಯ ಚೀನಿಯರೆ
ಸಿಡಿಲು ಮಿಂಚುಗಳೊಡನೆ
ಸರಸವಾಡುವಿರೆ ?

ತೊಟ್ಟಿಲದ ಕೂಸುಗಳು
ಸಿಂಹಗರ್ಜನೆಗೆಯ್ದು
ಕುಟ್ಟಿ ಪುಡಿಗೆಯ್ವರದೊ
ಬಾಂದಳವ ಹೊಯ್ದು ॥

ಬುದ್ಧ ಕೇಳ್, ಭಾರತದ
ಪೂಜ್ಯ ಪಿತನೇ, ಕೇಳು
ಉದ್ವಿಗ್ನದಿಂ ಬಂದು
ವೈರಿಯಪ್ಪನು ಹಾಳು ॥

ಮಾರಿಗೌತಣವಾಯ್ತು
ನೀ ಮೆಚ್ಚಿದಾ ಚೀನ !
ಕ್ರೂರ ಕರ್ಮಕೆ ಸಿಲುಕಿ
ಹಾಳಾಯ್ತು ಪ್ರಾಚೀನ ||

ಶಾಂತಿ ಸಮತೆಯ ಖಡ್ಗ
ಝುಳಪಿಸಲಿ ಕಿಡಿ ತೂರಿ
ಅಂತಕಾಂತಕನಿಂದು
ಮೊಳಗಿಸಲಿ ರಣಭೇರಿ ||

— ಆರ್. ಸಿ. ಹಿರೇಮಠ

# ಕವನಗಳ ಪ್ರಥಮ ಚರಣಗಳ ಅಕಾರಾದಿ

| ಅನುಕ್ರಮ ಸಂಖ್ಯೆ | ಕವನ | ಪುಟ ಸಂಖ್ಯೆ |
|---|---|---|
| ೨೦ | ಕೊನೆಯೆಚ್ಚರವಿದ ಕೊರೆದಿಡು ಮನದಲಿ .... .... | ೧ |
| ೨೧ | ಕ್ರುದ್ಧ್ಯತ್ ಕೇಸರಿಶಾವಕ್ಯೈಃ ಪ್ರಕಲಯನ್ .... .... | ೬೮ |
| ೨೨ | ಗರುಡನಂತೆ ಗರಿಗೆದರಿ ಹಾರಿತು ಹಾರಿತ್ತು .... .... | ೧೨೦ |
| ೨೩ | ಜಯಭಾರತ ! ನವಭಾರತ ! ಪ್ರಿಯ ಭಾರತ ವರ್ಷ ! .... | ೪೩ |
| ೨೪ | ಜಯ ನಮ್ಮದು ! ಜಯ ನಮ್ಮದು ! .... .... | ೧೧೩ |
| ೨೫ | ಜಯಭೇರಿ ? ಜಯ ಕೊನೆಗೆ ಮೊದಲಲೇ ಜಯವೆ ? .... | ೧೩೫ |
| ೨೬ | ಜಯಹಿಂದದ ಜಯಭೇರಿ ಜಯ ಹೊಂದುವ ಜಯಭೇರಿ | ೩೨ |
| ೨೭ | ಟೊಂಕ ಕಟ್ಟಿರಿ ನಾಡ ಬಂಟರೆಲ್ಲ .... .... .... | ೨೧ |
| ೨೮ | ತುರಿಸಹೋದವನೆದೆಗೆ ಹಾಯ್ದು ಕೆಡವಿತು .. .... | ೧೦೨ |
| ೨೯ | ನಡೆ ಮುಂದೆ, ನಡೆ ಮುಂದೆ .... .... .... | ೬೧ |
| ೩೦ | ನರಿಗೆ ಬಂದಿದೆ ಹರೆ .... ... ... .... | ೧೦೦ |
| ೩೧ | ನಾಗರಿಕತೆಯ ಧಮನಿಯಲಿ .. .... .... | ೫೪ |
| ೩೨ | ನಾಲ್ಕು ಕಾಲಿನದೆಲ್ಲ ಆಕಳೆಂದೇ ಬಗೆದು ... .... | ೬೫ |
| ೩೩ | ನಿನ್ನ ಹೆಸರು, ನಿನ್ನ ದೆಸೆ, ನಿನ್ನ ಕುಲಗೋತ್ರ .... .... | ೮೮ |
| ೩೪ | ನಿನ್ನದೇನುಂಟು ? ಎಲ್ಲ ರಾಷ್ಟ್ರದ ಗಂಟು .... .... | ೧೨೨ |
| ೩೫ | ಬಾ ಗಿರಿಗೆ ಹಿಮಗಿರಿಗೆ .... .... ... .... | ೭೧ |
| ೩೬ | ಬಿಲ್ಲು ಬಾಣ ಗದೆ ಕತ್ತಿ ಕೊಡಲಿಗಳು .... .... | ೯೮ |
| ೩೭ | ಭಾರತಾಂಬೆಯು ನಾನು ಕೊರಗೂತ ಕೂಗುವೆ .... | ೧೧೦ |
| ೩೮ | ಭಾರತೀಯ ಇವನೆ ಭಾರತೀಯ .... .... .... | ೪೧ |
| ೩೯ | ಮುಟ್ಟುವಿರೊ ಭಾರತಿಯ ಸೀಮಂತ ರತ್ನವನು ? .... | ೧೫೨ |
| ೪೦ | ಮುಗಿಲ ಕೆಚ್ಚಲ ಸುಧಾರಸ ತೀವಿ ಕೆರೆಕಟ್ಟೆ .... .... | ೧೩೯ |
| ೪೧ | ಮೋಡವೇ ಮಂಜಾಗಿ, ನೆಲವನಪ್ಪುತ ಸಾಗಿ .... .... | ೮೫ |